# ಪ್ರಾದೇಶಿಕತೆಯ ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯ ಕಥನ ಸಾಹಿತ್ಯ

(ವೀರಭದ್ರ, ಮತ್ತು ಕುಂ. ವೀರಭದ್ರ, ಅವರ ಕಥೆಗಳ ಮುಖೇನ...)

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ
ಎಂ.ಫಿಲ್ ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು
ಹೆಚ್. ಮಲ್ಲಿಕಾರ್ಜುನ

ಮಾರ್ಗದರ್ಶಕರು
ಡಾ. ಮಲ್ಲಿಕಾರ್ಜುನ ವಣೇನೂರು



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೬-೦೭

124

# ಪ್ರಾದೇಶಿಕತೆಯ ನೆಲೆಯಲ್ಲಿ
# ಬಳ್ಳಾರಿ ಜಿಲ್ಲೆಯ ಕಥನ ಸಾಹಿತ್ಯ

## (ವೀರಭದ್ರ ಮತ್ತು ಕುಂ.ವೀರಭದ್ರ ಅವರ ಕಥೆಗಳ ಮುಖೇನ...)

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ
ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)


ಸಂಶೋಧಕರು

**ಹೆಚ್. ಮಲ್ಲಿಕಾರ್ಜುನ**

ಮಾರ್ಗದರ್ಶಕರು

**ಡಾ. ಮಲ್ಲಿಕಾರ್ಜುನ ವಣೇನೂರು**





ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೬-೦೭

## ಮಾರ್ಗದರ್ಶಕರ ಪ್ರಮಾಣಪತ್ರ

ಪ್ರಾದೇಶಿಕತೆಯ ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯ ಕಥನ ಸಾಹಿತ್ಯ (ವೀರಭದ್ರ ಮತ್ತು ಕುಂ. ವೀರಭದ್ರ ಅವರ ಕಥೆಗಳ ಮುಖೇನ...) ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಹೆಚ್. ಮಲ್ಲಿಕಾರ್ಜುನ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೧೦.೦೮.೨೦೦೭.

**ಡಾ. ಮಲ್ಲಿಕಾರ್ಜುನ ವಣೇನೂರು**
ಮಾರ್ಗದರ್ಶಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪ್ರಮಾಣ ಪತ್ರ

ಪ್ರಾದೇಶಿಕತೆಯ ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯ ಕಥನ ಸಾಹಿತ್ಯ (ವೀರಭದ್ರ ಮತ್ತು ಕುಂ. ವೀರಭದ್ರ ಅವರ ಕಥೆಗಳ ಮುಖೇನ...) ಎಂಬ ನಿಬಂಧವನ್ನು ಡಾ. ಮಲ್ಲಿಕಾರ್ಜುನ ವಣೇನೂರು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಭಾಷಾ ನಿಕಾಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೧೦.೦೮.೨೦೦೭.

**ಹೆಚ್. ಮಲ್ಲಿಕಾರ್ಜುನ**
ಸಂಶೋಧಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ

ಆಧುನಿಕೋತ್ತರ ಕನ್ನಡ ಸಾಹಿತ್ಯಿಕ ಸಂದರ್ಭದಲ್ಲಿ ಪ್ರಾದೇಶಿಕತೆಯ ಚರ್ಚೆ ಬಹುಮುಖ್ಯವಾದ ಅಂಶವಾಗಿದೆ. ಆಯಾ ಪ್ರದೇಶದ ಆಡುನುಡಿಯ ಮೂಲಕ ಸಾಹಿತ್ಯಿಕ ಅಭಿವ್ಯಕ್ತಿ ಆರಂಭವಾದುದು ಬೇಂದ್ರೆಯವರ ಕಾವ್ಯದ ಮೂಲಕವಾದರೂ ದೇವನೂರರ ಕಥನಕಲೆಯಿಂದಾಗಿ ಅದೊಂದು ವಿಶಿಷ್ಟ ಪಂಥದ ರೂಪದಲ್ಲಿ ಬೆಳೆದುಬಂದಿರುವುದೊಂದು ವಿಶೇಷ.

ಟಾಲ್‌ಸ್ಟಾಯ್‌ರವರ ಕೊಸಕ್ಕರು ದಿ ಕೊಸೆಕ್ಸ್ ಕಿರುಕಾದಂಬರಿಯು ತುಂಬಾ ಹಿಂದೆಯೇ ಕನ್ನಡಕ್ಕೆ ಅನುವಾದವಾಯಿತು. ಈ ಕಾದಂಬರಿಯ ಕಥಾನಕವು ಕೂಡಾ ರಷ್ಯಾದ ಪ್ರಾದೇಶಿಕ ನೆಲೆಗಟ್ಟನ್ನುಳ್ಳದ್ದಾಗಿದೆ. ನವೋದಯ ಸಾಹಿತ್ಯದ ಸಂದರ್ಭದಲ್ಲಿ ಟಾಲ್‌ಸ್ಟಾಯ್ ಅವರ ಕಥನಕಲೆಯ ಪ್ರಭಾವ ಅದೆಷ್ಟೋ ಭಾರತೀಯ ಲೇಖಕರ ಮೇಲಾಯಿತು. ಕುವೆಂಪುರವರ ಕಾದಂಬರಿಗಳಲ್ಲೂ ಟಾಲ್‌ಸ್ಟಾಯ್‌ರವರ ಪ್ರಭಾವವನ್ನು ಕಾಣಬಹುದಾಗಿದೆ. ಆದಾಗ್ಯೂ ಕುವೆಂಪುರವರು ಪಶ್ಚಿಮಘಟ್ಟಗಳ ದಟ್ಟಕಾನನಗಳ ನಡುವಿನ ಜೀವನವಿಧಾನವನ್ನು ಅಭಿವ್ಯಕ್ತಿಸಲು ಕನ್ನಡದ ಅಭಿಜಾತವೆನ್ನಬಹುದಾದಂತಹ ಭಾಷಾ ಶೈಲಿಯೊಂದನ್ನು ರೂಢಿಸಿದರು. ಆಧುನಿಕ ಸಂದರ್ಭದಲ್ಲಿ ಕನ್ನಡದ ಸಾಧ್ಯತೆಯನ್ನು ವಿಶ್ವಸಾಹಿತ್ಯದ ಮಟ್ಟಕ್ಕೆ ಎತ್ತರಿಸಿದ ಕೀರ್ತಿ ಕುವೆಂಪುರವರಿಗೆ ಸಲ್ಲುತ್ತದೆ. ಅದೆಂತಹ ಕ್ಲಿಷ್ಟ ಅನುಭವವನ್ನಾದರೂ ಪ್ರಾದೇಶಿಕತೆಯ ಸೊಗಡನ್ನಾದರೂ ಸಂವಹನದ ದೃಷ್ಟಿಯಿಂದ ಕನ್ನಡದ ಅಭಿಜಾತ ಶೈಲಿಯಲ್ಲಿ ವ್ಯಕ್ತಗೊಳಿಸಬಹುದೆಂಬುದನ್ನು ಕುವೆಂಪುರವರು, ಕಾರಂತರು, ಮಾಸ್ತಿಯವರು ತಮ್ಮ ಕೃತಿಗಳ ಮೂಲಕ ತೋರಿಸಿಕೊಟ್ಟರು.

ಆದರೆ ಆಶ್ಚರ್ಯಕರವಾಗಿ ಇದೇ ಸಂದರ್ಭದಲ್ಲಿ ಉಪಭಾಷೆ ಮತ್ತು ಆಡುಭಾಷೆಗಳಲ್ಲಿ ಸಾಹಿತ್ಯ ರಚಿಸುವ ಒಂದು ಚಳುವಳಿಯೇ ಆಂಧ್ರಪ್ರದೇಶದಲ್ಲಿ ನಡೆದುದು ವಿಶೆಷವಾಗಿತ್ತು. ಅಲ್ಲಿ ಕನ್ಯಾಶುಲ್ಕಂ ನಂತಹ ಮೇರು ಕೃತಿಯೊಂದು ಆಡುಭಾಷೆಯಲ್ಲಿಯೇ ರೂಪುಗೊಂಡಿತು. ಕನ್ನಡದಲ್ಲಿ ಮಾತ್ರ ಬೇಂದ್ರೆಯವರ ಕಾವ್ಯದ ಮೂಲಕ ಪ್ರಯೋಗಾತ್ಮಕವಾಗಿ ಕಾಣಿಸಿಕೊಂಡ ಈ ಅಭಿವ್ಯಕ್ತಿ ಕ್ರಮವು ದೇವನೂರರ ಮೂಲಕ ವಿಸ್ತೃತ ರೂಪ ಪಡೆಯಿತು.

ಹೀಗೆ ಕಾಣಿಸಿಕೊಂಡ ಅಭಿವ್ಯಕ್ತಿ ಕ್ರಮವು ಕನ್ನಡದ ಸಾಹಿತ್ಯಿಕ ಸಂದರ್ಭದಲ್ಲಿ ಹೊಸ ಸಾಧ್ಯತೆಗಳನ್ನು ಹುಟ್ಟು ಹಾಕಿತೆನ್ನುವುದರಲ್ಲಿ ಎರಡು ಮಾತಿಲ್ಲ. ದೇವನೂರು ಮಹಾದೇವರವರ ಕೃತಿಗಳೇ ಇದಕ್ಕೆ ನಿದರ್ಶನ. ಪರಂಪರಾಗತ ಅಭಿವ್ಯಕ್ತಿಯ ಜಾಡನ್ನು ಮತ್ತು ಭಾಷಾ ಶೈಲಿಯನ್ನು ಬದಲಿಸಿ ದೇವನೂರರು ಹೊಸ ಭಾಷ್ಯ ಬರೆದರು. ಕನ್ನಡದ ಉಪಭಾಷೆಯೊಂದರಲ್ಲಿ ಕೃತಿರಚಿಸಿದ ಇವರು ಗುಣಮಟ್ಟದಲ್ಲೂ, ತಂತ್ರಗಾರಿಕೆಯಲ್ಲೂ ತಮಗೆ ತಾವೇ ಸಾಟಿಯೆಂಬುದನ್ನು ನಿರೂಪಿಸಿದರು. ನವೋದೋಯದ ಕಾಲದಲ್ಲಿ ಕುವೆಂಪುರವರಿಂದ ಹದಗೊಂಡ ಕನ್ನಡದ ಗದ್ಯದ ಲಯ ಮತ್ತು ಕಾವ್ಯಾತ್ಮಕತೆಗೆ ದೇವನೂರರು ನಾದದ ಝರಿಯೊಂದನ್ನು ಸೇರಿಸಿದರು.

ದೇವನೂರರನ್ನು ಅನುಕರಿಸಲು ಹೊರಟ ಅನೇಕ ಲೇಖಕರು ಆಡುಭಾಷೆಯಲ್ಲಿ ಮತ್ತು ಪ್ರಾದೇಶೀಕತೆಯ ಬಂಧದಲ್ಲಿ ಕೃತಿರಚಿಸಿದರು. ಇವರ ಪ್ರಯತ್ನ ಸ್ತುತ್ಯಾರ್ಹವಾದುದಾದರೂ ಅಂತಹ ಗಮನಾರ್ಹವಾದ ಯಶಸ್ಸನ್ನೇನೂ ಸಾಧಿಸಲಾಗಿಲ್ಲವೆನ್ನಬಹುದು. ಆದಾಗ್ಯೂ ಪ್ರಾದೇಶಿಕತೆಯ ನೆಲೆಯಲ್ಲಿ ಕನ್ನಡದಲ್ಲಿ ಸೃಷ್ಟಿಗೊಂಡ ಸಾಹಿತ್ಯದ ಗುಣಮಟ್ಟವನ್ನು ವಿಶ್ಲೇಷಿಸುವ ಬದಲಿಗೆ ಭಾಷಿಕವಾಗಿ ಅದರ ಪರಿಣಾಮಗಳನ್ನು ಕುರಿತು ಚರ್ಚಿಸುವುದು ಹೆಚ್ಚು ಉಪಯುಕ್ತವೇನೊ ಅನ್ನಿಸುತ್ತದೆ.

ಆದರೂ ಸಾಹಿತ್ಯದೊಂದಿಗೆಯೇ ಮುನ್ನೆಲೆಗೆ ಬಂದ ಪ್ರಾದೇಶಿಕತೆಯ ಚರ್ಚೆ ಮಹತ್ವಪೂರ್ಣವಾದುದು. ಇಲ್ಲಿ ಪ್ರಾದೇಶೀಕತೆಯೆಂದರೇನು ಎಂಬುದರ ಚರ್ಚೆಯೊಂದಿಗೆ ನಿರ್ದಿಷ್ಟ ಪ್ರದೇಶವೊಂದರ ಸಾಹಿತ್ಯಿಕ ಕೃತಿಗಳ ವಸ್ತು ಮತ್ತು ಬಳಸಲ್ಪಟ್ಟ ಭಾಷೆಯ ಮೇಲೆ ಪ್ರಾದೇಶಿಕತೆಯನ್ನು ನಿರ್ಧರಿಸಲಾಗುತ್ತದೆಯೇ ಅಥವಾ ಸಾಮಾಜಿಕ ಚಳುವಳಿಗಳ ಭಾಗವಾಗಿ ಪ್ರದೇಶವೊಂದರ ಹಿಂದುಳಿದಿರುವಿಕೆಗೆ ಪ್ರತಿಭಟನಾ ರೂಪವಾಗಿ ಸಾಹಿತ್ಯ ನಿರ್ಮಾಣಗೊಂಡಿದೆಯೇ ಎಂಬುದನ್ನು ಸಹ ವಿಶ್ಲೇಷಣಾರ್ಹ ಸಂಗತಿಯಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ವೀರಭದ್ರ ಮತ್ತು ಕುಂವೀ ಅವರ ಕಥೆಗಳ ಮುಖೇನ ಪ್ರಾದೇಶಿಕ ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯ ಕಥನದ ಸ್ವರೂಪವನ್ನು ತಿಳಿಯಲು ಉದ್ದೇಶಿಸಲಾಗಿದೆ.

## ಅಧ್ಯಾಯ ಎರಡು

# ಬಳ್ಳಾರಿ ಜಿಲ್ಲೆಯ ಪ್ರಾದೇಶಿಕ, ಸಾಂಸ್ಕೃತಿಕ ವೈಶಿಷ್ಟತೆಗಳು

೨.೧. ಬಳ್ಳಾರಿ ಪದದ ನಿಷ್ಪತ್ತಿ: ಬೆಳವಣಿಗೆ

ಬಳ್ಳಾರಿ ಎಂಬುದು ಕೇವಲ ಕರ್ನಾಟಕದಲ್ಲಿ ಅಷ್ಟೇ ಅಲ್ಲ ಇಡೀ ಭಾರತದಲ್ಲಿ ತುಂಬಾ ವೈಶಿಷ್ಟ್ಯತೆಯನ್ನು ಪಡೆದಿದೆ. ಇಲ್ಲಿ ಮೊಲವೇ ನಾಯಿಯನ್ನು ಎದುರಿಸಿ, ತಿರುಗಿ ನಿಂತು ಓಡಿಸಿಕೊಂಡು ಹೋಗುವುದನ್ನೇ ಕಂಡು ಇದು ಪುಣ್ಯ ಭೂಮಿ, ವೀರಭೂಮಿ ಎಂಬುದನ್ನು ಮನಗಂಡು ವಿದ್ಯಾರಣ್ಯರು ಇಲ್ಲಿ ವಿಜಯನಗರ ಎಂಬ ಸಾಮ್ರಾಜ್ಯವನ್ನು ಕಟ್ಟಿದರೆಂಬ ಐತಿಹ್ಯವಿದೆ. ಲಭ್ಯವಿದ್ದ ಗ್ಯಾಸೆಟಿಯರ್‌ನ ಉಲ್ಲೇಖದಂತೆ

ಜನ್ನನ ಯಶೋಧರ ಚರಿತೆಯಲ್ಲಿ ಬಳ್ಳಾರಿ ಎಂಬ ಪದವು ಬಳಕೆಯಾಗಿದೆ. ಇದಕ್ಕಿಂತಲೂ ಮುಂಚೆ ಶಾಸನಗಳಲ್ಲಿ, ಪೂರ್ವದ ಕಾವ್ಯಗಳಲ್ಲಿ 'ಬಳಾರಿ', 'ಬಳರಿ' ಎಂಬುದನ್ನು ಪ್ರಸ್ತಾಪಿಸಲಾಗಿದೆ. ಬಳ್ಳಾರಿ ಸಂಸ್ಕೃತ ಪದ ಎನ್ನುವುದಾದರೆ, ಪದವನ್ನು ವಿಭಜಿಸುವುದಾದರೆ ಬಲೌ ಅರಿ, ಅಥವಾ ಬಲ ಅರಿ ರಾಕ್ಷಸನ ಶತ್ರುವು ಎಂದು ಅರ್ಥೈಸುವುದಾದರೆ ಇದು ಹೆಣ್ಣು ದೇವತೆಯೆಂಬ ಅರ್ಥ ನೀಡಲಾರದು. ಇಲ್ಲಿ ಬಲ ಎಂಬ ರಾಕ್ಷಸನನ್ನು ಇಂದ್ರನು ಕೊಂದ, ಇಲ್ಲವೆ ರಾಕ್ಷಸನ ವೈರಿ ಎಂದು ತಿಳಿಯುತ್ತದೆ. ಇದು ಕನ್ನಡದ ಸಹಜ ನಾಮವಾಗಿರಬೇಕು, ಇದು ಸ್ತ್ರೀ ಸೂಚಕ, ವ್ಯಕ್ತಿಸೂಚಕ, ಶಿವಶರಣಸೂಚಕ ಬಳಕೆಯಾಗಿದೆ. 'ಬಳರಿ' ಎಂಬ ಪದವನ್ನು ಭಟಾರಿ ಭಟಾರಿ ಭಳಾರಿ ಬಳರಿ ಬಳ್ಳಾರಿ ಈ ರೀತಿಯಲ್ಲಿ ಮಾರ್ಪಟ್ಟಿರಬೇಕು. ಮೇಲೆ ಸೂಚಿಸಿದಂತೆ ಕೇಶಿರಾಜನ ಶಬ್ದಮಣಿ ದರ್ಪಣಂ ಕೃತಿಯ ಠ ಕಾರವು ಢ ಕಾರ ಆದೇಶವಾಗಿ ಬಳಸಲ್ಪಟ್ಟಿರಬೇಕು. ನಂತರ ಡೌ ಳ ಅಂದರೆ ಡ ಕಾರಂ ಬೆಟ್ಟಿತ್ತಾಗಿ ಉಚ್ಚರಿಸಿದೊಡೆ ಳ ಕಾರುಂಬರೆಗುಂ ಎಂದಂತೆ ಡ ಳ ಆಗಿರಬೇಕು. ಭಡಾರಿ ಎಂಬ ಶಬ್ದವು ಗ್ರಾಮೀಣ ಜನತೆಯಲ್ಲಿ ಭಡಾರಿಯಂತವಳು, ಭಡಾಯಿ ಕೊಚ್ಚಿಕೊಳ್ಳುವವಳು, ಸ್ವಸಾಮರ್ಥ್ಯದಂತೆ ನಿಲುವು ಕೈಕೊಳ್ಳುವವಳು ಎಂದಾಗುತ್ತದೆ.

ಬಳ್ಳಾರಿ ಪದದ ಉಲ್ಲೇಖವು ತುಂಬಾ ಸ್ವಾರಸ್ಯಕರವಾಗಿದೆ. ಇದರ ಉತ್ಪತ್ತಿ ಕಾವ್ಯಗಳಲ್ಲಿ, ಶಾಸನಗಳಲ್ಲಿ, ದಂತಕಥೆಗಳಲ್ಲಿ ಹಾಗೂ ಜನಪದ ಗೀತೆಗಳಲ್ಲಿ ಉಲ್ಲೇಖಗೊಂಡಿದೆ. ಸ್ಕಂಧ ಪುರಾಣದಲ್ಲಿ ಬಳ್ಳಾರಿ ಪ್ರದೇಶವನ್ನು 'ಲೋಹಾಚಲ' ಎಂದೂ ಇತರೆ ಪ್ರಾಚೀನ ಕಾವ್ಯಗಳಲ್ಲಿ 'ಜಂಭೂದ್ವೀಪ' ಎಂದು ಕರೆಯುತ್ತಿದ್ದರು. ಕ್ರಿ.ಶ. ೧೦೪೦ ರಲ್ಲಿ ಚಂದ್ರರಾಜನ 'ಮದನತಿಲಕ'ವೆಂಬ ಕಾಮಶಾಸ್ತ್ರ ಗ್ರಂಥದಲ್ಲಿ ಬಳರಿ ನೋಂಪಿಗೆ ಗೌರವಸ್ಥ ಸ್ತ್ರೀಯರು ಹೋಗಕೂಡದೆಂದು ತಿಳಿಸಲಾಗಿದೆ. ಕ್ರಿ.ಶ. ೧೧೦೦ ರಲ್ಲಿ ಬ್ರಹ್ಮಶಿವನ 'ಸಮಯ ಪರೀಕ್ಷೆ' ಎಂಬ ಕೃತಿಯಲ್ಲಿ 'ಬಳರಿ' ಎಂಬುದು ಅನೇಕ ಬಾರಿ ಬಳಕೆಯಾಗಿದೆ. ಈ ಪದ್ಯದಲ್ಲಿ 'ಬನದ ಬಳಾರಿ' ಎಂತಲೂ ಬಳಸಲಾಗಿದೆ.

ಎಕ್ಕಲ ದೇವಿಗಮಮಾ
ಲಕ್ಕನಿಗಂ ಬನದ ಬಳರಿಗಂ ಮೈಲಾರಂ
ಗಳ್ಕದೆ ಜಾತ್ರೆಯನಾಳ್ವಂ
ಮಕ್ಕಳಂ ಜೈನನಲ್ಲನೆಂತು ಕಾಳಂ [೨]

ಈ ಪದ್ಯದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ನಡೆಯುವ ಪ್ರಸಿದ್ಧ ಮೈಲಾರಲಿಂಗ ಜಾತ್ರೆಗೆ ಜನರು ಹೋಗುವುದನ್ನು ಖಂಡಿಸಲಾಗಿದೆ. ಕ್ರಿ.ಶ. ೧೩೬೩ ರಲ್ಲಿ ಭೀಮಕವಿಯ ಬಸವ ಪುರಾಣದಲ್ಲಿ 'ದಿಟ್ಟ ಭಳಹರಿ' ಮಾರಿಗೆ ಎಂದಿದ್ದಾರೆ. ರಾಜಶೇಖರ ವಿಳಾಸದಲ್ಲಿ ಒಬ್ಬ ಸೂಳೆಗೆ ಮೋಸಮಾಡಿದ ವ್ಯಕ್ತಿಯೊಬ್ಬನಿಗೆ ಬಲಿಕಟ್ಟಿ 'ಮನ್ಮಥ ಬಳಾರಿ'ಗೆ ದೊಡ್ಡ ಕುರಿ ಮಾಡಿ ಕಡಿಯುತ್ತೇನೆ... ಇಲ್ಲಿ 'ಮನ್ಮಥ ಬಳಾರಿ' ಎಂಬುದು ಬಳಕೆಯಾಗಿದೆ.

ಶಾಸನಗಳ ಆಧಾರದಿಂದಲೂ ಭಳಾರಿಯ ಬಳಕೆಯನ್ನು ತಿಳಿಯಬಹುದು. ಜಿಲ್ಲೆಯ ಹೆಸರು ಕುರುಗೋಡಿನಲ್ಲಿ ದೊರೆತ ಕ್ರಿ.ಶ. ೯೭೧ ರ ಶಾಸನದಲ್ಲಿ ರಾಷ್ಟ್ರಕೂಟರ ದೊರೆ ಕೊಟ್ಟಿಗನು 'ಸ್ಕಂಧ'ನ ಪ್ರತಿಷ್ಠಾಪನೆ ಮಾಡಿದನು ಎಂದಿದೆ. ಇದರಿಂದ ರಾಷ್ಟ್ರಕೂಟರ ಆಳ್ವಿಕೆ ಇತ್ತು ಎಂಬುದು ತಿಳಿದುಬರುತ್ತದೆ, ಆದರೆ ಬಳಾರಿಯ ಪ್ರಸ್ತಾಪವಿಲ್ಲ. ಆದರೆ ಬಳ್ಳಾರಿಯ ಸಮೀಪದ ಸಿರಿವಾರದ ಕ್ರಿ.ಶ. ೧೦೪೪ ರ ಈಶ್ವರ ದೇವಾಲಯದ ಮುಂಭಾಗದ ಶಾಸನದಲ್ಲಿ ಈ ರೀತಿಯ ಉಲ್ಲೇಖವಿದೆ. ಚಾಲುಕ್ಯ ದೊರೆಯ ಸಾಮಂತ ಪಲ್ಲವರಸನು ಕಪ್ಪಗಲ್ಲು ಗ್ರಾಮದಲ್ಲಿ ಮಹದೇವರಿಗೆ ಎಂಟು ಮತ್ತರು, ಮಠಕ್ಕೆ ಎಂಟುಮತ್ತರು ಭೂಮಿಯನ್ನು ಜೇಷ್ಠರಾಶಿ ಭಳಾರಿಗೆ ಧಾರಾಳಪೂರ್ವಕವಾಗಿ ಕೊಟ್ಟರು ಎಂದಿದೆ. ಇದು ಮೊಟ್ಟಮೊದಲು ಭಳಾರಿ ಪದ ಬಳಕೆಯಾದ ಶಾಸನವಾಗಿದೆ. ಕ್ರಿ.ಶ. ೧೧೦೦ ರಿಂದ ೧೧೪೧ ರವರೆಗೆ ಆಳಿದ ವಿಷ್ಣುವರ್ಧನನ ವಶದಲ್ಲಿದ್ದ ದುರ್ಗಗಳಲ್ಲಿ ಬಳರಿ ದುರ್ಗವು ಒಂದಾಗಿತ್ತೆಂದು ತಿಳಿಯುತ್ತದೆ. ಹೀಗೆ ಈ ಎಲ್ಲಾ ಶಾಸನಗಳಿಂದ ಬಳ್ಳಾರಿ ಪದದ ಉತ್ಪತ್ತಿ ಮತ್ತು ಅದರ ಬೆಳವಣಿಗೆಯನ್ನು ತಿಳಿಯಬಹುದು. ಕರ್ನಾಟಕ ಸಂಸ್ಕೃತಿಯನ್ನು ಎತ್ತಿಹಿಡಿಯುವುದರ ಜೊತೆಗೆ, ಜಿಲ್ಲೆಯು ಭೌಗೋಳಿಕವಾಗಿ, ಚಾರಿತ್ರಿಕವಾಗಿ, ಪೌರಾಣಿಕವಾಗಿ ಹಾಗೂ ಧಾರ್ಮಿಕವಾಗಿ ಸಾಕಷ್ಟು ವೈಶಿಷ್ಟ್ಯತೆಗಳನ್ನು ಪಡೆದಿದೆ.

**೨.೨ ಭೌಗೋಳಿಕ ನೆಲೆ**

ಕರ್ನಾಟಕ ರಾಜ್ಯವು ೧೨ ಮತ್ತು ೧೮ ಉತ್ತರ ಅಕ್ಷಾಂಶ ಮತ್ತು ೭೪ ಹಾಗೂ ೭೮ ರೇಖಾಂಶಗಳ ನಡುವೆ ಇದ್ದು, ಅದು ದಖನ್ ಪ್ರಸ್ಥಭೂಮಿಯ ಮೇಲೆ ನೈರುತ್ಯಕ್ಕೆ ಇದೆ. ಕರ್ನಾಟಕದ ಪ್ರಮುಖ ಜಿಲ್ಲೆಗಳಲ್ಲಿ ಬಳ್ಳಾರಿಯು ಒಂದು. ಬಳ್ಳಾರಿ ಜಿಲ್ಲೆಯು ೧೫ ೩೦ ಮತ್ತು ೭೭ ೧೧ ಪೂರ್ವರೇಖಾಂಶ ಇವುಗಳ ಮಧ್ಯೆದಲ್ಲಿದೆ.[೫] ಈ ಜಿಲ್ಲೆ ಉತ್ತರದಲ್ಲಿ ರಾಯಚೂರು, ಪಶ್ಚಿಮದಲ್ಲಿ ಧಾರವಾಡ, ದಕ್ಷಿಣದಲ್ಲಿ ಚಿತ್ರದುರ್ಗ ಜಿಲ್ಲೆ ಹಾಗೂ ಪೂರ್ವದಲ್ಲಿ ಆಂಧ್ರಪ್ರದೇಶದ ಕರ್ನೂಲು ಜಿಲ್ಲೆ ಮತ್ತು ಅನಂತಪುರ ಜಿಲ್ಲೆಗಳಿಂದ ಸುತ್ತುವರೆದಿದೆ.

ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಮದ್ರಾಸು ಪ್ರಾಂತ್ಯಕ್ಕೆ ಸೇರಿದ ಆದವಾನಿ, ಆಲೂರು ಮತ್ತು ರಾಯದುರ್ಗ ತಾಲ್ಲೂಕುಗಳು ಸೇರ್ಪಡೆಯಾಗಿದ್ದವು. ೧೯೫೩ ರಂದು ಆಂಧ್ರಪ್ರದೇಶವು ಭಾಷಾವಾರು ಪ್ರಾಂತ್ಯದಿಂದ ವಿಭಜನೆಗೊಂಡಾಗ ಈ ಮೂರು ತಾಲ್ಲೂಕುಗಳು ಆಂಧ್ರಕ್ಕೆ ಸೇರ್ಪಡೆಯಾದವು.

ಬಳ್ಳಾರಿ ಜಿಲ್ಲೆಯು ೮,೪೧೧ ಚ.ಕಿ.ಮೀ. ವಿಸ್ತೀರ್ಣವನ್ನು ಹೊಂದಿದ್ದು, ೨೦೦೧ರ ಜನಗಣತಿಯ ಪ್ರಕಾರ ೨೦,೨೭,೧೪೦ ಜನಸಂಖ್ಯೆಯನ್ನು ಹೊಂದಿದೆ.[೬] ಜಿಲ್ಲೆಯ ವಿಸ್ತೀರ್ಣದಲ್ಲಿ ಬಳ್ಳಾರಿ ತಾಲ್ಲೂಕು ಅತಿ ಹೆಚ್ಚು ವಿಸ್ತೀರ್ಣ ಹೊಂದಿದ್ದರೆ, ಹೊಸಪೇಟೆ ತಾಲ್ಲೂಕು ಅತಿ ಕಡಿಮೆ ೯೪೩ ಚ.ಕಿ.ಮೀ. ವಿಸ್ತೀರ್ಣ ಹೊಂದಿದೆ. ಜಿಲ್ಲೆಯು ರಾಜಧಾನಿಯಿಂದ ೩೦೯ ಕಿ.ಮೀ. ದೂರದಲ್ಲಿದ್ದು, ಏಳು ತಾಲೂಕುಗಳನ್ನು (ಬಳ್ಳಾರಿ, ಸಂಡೂರು, ಹೊಸಪೇಟೆ, ಹಡಗಲಿ, ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ, ಶಿರುಗುಪ್ಪ) ಹೊಂದಿದೆ.

ಸಾಹಿತಿ ಬೀಚಿಯವರು ಇಲ್ಲಿರುವುದು ಎರಡೇ ಕಾಲ ಬೇಸಿಗೆ ಕಾಲ, ಅತಿಬೇಸಿಗೆ ಕಾಲ ಎಂದು ತಮಾಷೆಗಾಗಿ ನುಡಿದಿರುವುದು ಬೇಸಿಗೆಯಲ್ಲಿ ಅತೀ ಬೇಸಿಗೆ, ಚಳಿಗಾಲದಲ್ಲಿ ಅತೀ ಚಳಿ ಎಂಬುದನ್ನು ತೋರಿಸುತ್ತದೆ.

ಈ ಜಿಲ್ಲೆಗೆ ತುಂಗಭದ್ರಾ ನದಿ ವರಪ್ರಸಾದವಾಗಿದೆ. ವೇದಾವತಿ, ಹಗರಿ ಮತ್ತು ಚಿಕ್ಕ ಹಗರಿಗಳು ತುಂಗಭದ್ರಾ ನದಿಯ ಉಪನದಿಗಳಾಗಿವೆ. ಪಶ್ಚಿಮ ಮತ್ತು ಉತ್ತರದಂಚಿನ ಗಡಿರೇಖೆಯಾಗಿ ಈ ನದಿಯು ಹರಿಯುತ್ತದೆ.

ಇದು ಹರಪನಹಳ್ಳಿಯ ಕಡತಿ ಗ್ರಾಮದಿಂದ ಪ್ರವೇಶಿಸಿ ಹರಪನಹಳ್ಳಿ, ಹಡಗಲಿ, ಹೊಸಪೇಟೆ ಮತ್ತು ಶಿರುಗುಪ್ಪ ತಾಲೂಕುಗಳ ಉತ್ತರದ ಎಲ್ಲೆಯಾಗಿ ೩೨೨ ಕಿ.ಮೀ. ದೂರ ಹರಿಯುತ್ತದೆ. ತುಂಗಾ ಪಾನಂ, ಗಂಗಾ ಸ್ನಾನಂ ಎಂಬ ನಾಣ್ಣುಡಿಯನ್ನು ಸಾರ್ಥಕಗೊಳಿಸಿದೆ. ಮಲ್ಲಾಪುರ ಎಂಬ ಊರಿನಲ್ಲಿ ತುಂಗಭದ್ರಾ ಅಣೆಕಟ್ಟು ನಿರ್ಮಾಣವಾಗಿದೆ. ಇದಲ್ಲದೆ ಸಣ್ಣಪುಟ್ಟ ತೊರೆಗಳಿಂದ ನೀರಾವರಿಗೆ ತುಂಬಾ ಉಪಯುಕ್ತವಾಗಿದೆ. ಇಲ್ಲಿರುವ ತೊರೆಗಳಲ್ಲಿ ಹಗ್ಗನೂರು ತೊರೆ, ಹಂಪಸಾಗರ ಹೊಳೆ, ಚೆಲ್ಲ ಹುಣಿಸೆ ಹೊಳೆ, ಗೌರೀಪುರ ಹೊಳೆ ಹಾಗೂ ನಾರಿಹಳ್ಳಗಳಿವೆ. ಇದರೊಂದಿಗೆ ೨೨ ದೊಡ್ಡಕೆರೆಗಳು, ೧೭೦ ಕೆರೆಗಳು ಈ ಜಿಲ್ಲೆಯಲ್ಲಿವೆ.

ಸಾಮಾನ್ಯವಾಗಿ ಈ ಜಿಲ್ಲೆಯಲ್ಲಿ ಕಪ್ಪು ಮಣ್ಣು ಜೊತೆಗೆ ಕಲ್ಲು ಮತ್ತು ಬೆಣಚುಕಲ್ಲುಗಳಿಂದ ಮಿಶ್ರಿತವಾಗಿದೆ. ಪ್ರಧಾನ ಬೆಳೆಗಳೆಂದರೆ ಜೋಳ, ಭತ್ತ, ಹತ್ತಿ, ಮೆಣಸಿನ ಕಾಯಿ, ಶೇಂಗಾ ನೆಲಗಡಲೆ, ಸಜ್ಜೆ ಹಾಗೂ ನವಣೆ ಮುಖ್ಯ ಬೆಳೆಗಳು. ಹತ್ತಿಯು ಮದರಾಸು ಮತ್ತು ಮುಂಬೈಗಳಿಗೆ ರಫ್ತಾಗುತ್ತಿತ್ತು. ೧೮೮೩ ರ ಹೊತ್ತಿಗೆ ಏಳು ಹತ್ತಿ ದಾರದ ಮಿಲ್ಲುಗಳು ಪ್ರಾರಂಭವಾದವು. ಬಳ್ಳಾರಿ ಸ್ಪಿನ್ನಿಂಗ್ ಅಂಡ್ ವೇವಿಂಗ್ ಮಿಲ್ ಇದು ಬಳ್ಳಾರಿಯ ಅಲ್ಲೀಪುರದ ಬಳಿ ಇತ್ತು. ಇಂದಿಗೂ ಇದನ್ನು ದಾರದ ಮಿಲ್ ಪ್ರದೇಶ ಎಂದು ಜನರು ಕರೆಯುತ್ತಾರೆ. ಬಳ್ಳಾರಿಯು ಹತ್ತಿಯ ವ್ಯಾಪಾರಕ್ಕೆ ಸಂಬಂಧಿಸಿದಂತೆ ಮದ್ರಾಸ್, ಮೈಸೂರು, ಮಂಗಳೂರು, ಹಾಗೂ ಮುಂಬೈಗಳ ಮಧ್ಯದ ವಿನಿಮಯ ಮಾರುಕಟ್ಟೆಯಾಗಿತ್ತು. ಜೇರಿ ಎಂಬ ಉತ್ತಮ ದರ್ಜೆಯ ಹತ್ತಿಗೆ ಬೇಡಿಕೆ ಹೆಚ್ಚು ಇತ್ತು. ಮೈಸೂರಿನಲ್ಲಿ ತಯಾರಾಗುತ್ತಿದ್ದ ರೇಷ್ಮೆಬಟ್ಟೆಗಳಿಗೆ ಬಳ್ಳಾರಿಯು ಮಾರುಕಟ್ಟೆಯಂತಿತ್ತು. ಗುಂತಕಲ್ಲು ಮೂಲಕ ಮದ್ರಾಸಿಗೆ ಹಾದುಹೋಗುವ ರೈಲುಹಳಿಯನ್ನು ೧೮೭೧ ರಲ್ಲಿ ಬಳ್ಳಾರಿವರೆಗೂ ಜೋಡಿಸಲಾಯಿತು. ೧೮೮೪ ರಲ್ಲಿ ಬಳ್ಳಾರಿ-ಹೊಸಪೇಟೆ ಮಧ್ಯೆ, ೧೮೮೭ ರಲ್ಲಿ ಗುಂಡಾ ರೋಡ್ ಜಂಕ್ಷನ್-ಸಾಮೇಹಳ್ಳಿ ಮಧ್ಯೆ, ೧೯೦೫ ರಲ್ಲಿ ಬಳ್ಳಾರಿ-ರಾಯದುರ್ಗ(ಸುಮಾರು ೫೪ ಕಿ.ಮೀ.) ಮಧ್ಯೆ ಸಂಪರ್ಕಿಸಲಾಯಿತು.

ಅಲ್ಲದೆ ಪ್ರಸ್ತುತ ಜಿಲ್ಲೆ ಕಬ್ಬಿಣ ಮತ್ತು ಮ್ಯಾಂಗನೀಸ್ ಖನಿಜಗಳಿಂದ ವಿಶ್ವವಿಖ್ಯಾತಿಯನ್ನು ಗಳಿಸಿದ್ದು, ಈ ಜಿಲ್ಲೆಯಲ್ಲಿ ಇನ್ನು ಅನೇಕ ಲೋಹ ಮತ್ತು ಲೋಹೇತರ ಖನಿಜಗಳು ಲಭ್ಯವಿವೆ. ಇತ್ತೀಚಿಗೆ ನಡೆದ ಅಧ್ಯಯನಗಳ ಪ್ರಕಾರ ಜಿಲ್ಲೆಯ ಅದಿರಿನ ನಿಕ್ಷೇಪದ ಪ್ರಮಾಣ ೧೮.೮೧ ದಶಲಕ್ಷ ಟನ್‌ಗಳೆಂದು ಅಂದಾಜಿಸಲಾಗಿದೆ. ೧೯೭೬ ರಿಂದ ೧೯೯೧ ರವರೆಗಿನ ಅವಧಿಯಲ್ಲಿ ವಾರ್ಷಿಕ ಕಬ್ಬಿಣ ಅದಿರಿನ ಉತ್ಪತ್ತಿ ಸರಾಸರಿ ೨.೭೫ ರಿಂದ ೪.೫ ದಶಲಕ್ಷ ಟನ್ ಮತ್ತು ಮ್ಯಾಂಗನೀಸ್ ಖನಿಜದ್ದು ೧೩.೫೦ ಲಕ್ಷ ಟನ್ ಎಂದು ತಿಳಿದುಬರುತ್ತದೆ.[೮] ಸುಪ್ರಸಿದ್ಧ ಭೂವಿಜ್ಞಾನಿ ಬ್ರೂಸ್‌ಫುಟ್ ಅವರು 'ಇತಿಹಾಸ ಪೂರ್ವ ಕುರುಹುಗಳು ಈ ಜಿಲ್ಲೆಯಲ್ಲಿ ಅತ್ಯಂತ ಶ್ರೀಮಂತವಾಗಿವೆ'[೯] ಎಂಬುದಾಗಿ ಉಲ್ಲೇಖಿಸಿದ್ದಾರೆ.

### ೨.೩ ಚಾರಿತ್ರಿಕ ನೆಲೆಗಳು

ದಕ್ಷಿಣ ಭಾರತದ ಇತಿಹಾಸದಲ್ಲಿ ಬಳ್ಳಾರಿ ಪ್ರತಿಕಾಲಘಟ್ಟದಲ್ಲಿಯೂ ಒಂದಲ್ಲ ಒಂದು ರೀತಿಯಲ್ಲಿ ಗುರುತಿಸಿಕೊಂಡು ಬಂದಿದೆ. ಬಳ್ಳಾರಿಯ ಇತಿಹಾಸವು ಪೂರ್ವಕಾಲದಿಂದಲೂ ಇದೆಯೆಂದು ಬಳ್ಳಾರಿಯಲ್ಲಿ ಕ್ಷೇತ್ರಕಾರ್ಯ ನಡೆಸಿದ ಖ್ಯಾತ ಪ್ರಾಕ್ತನಶಾಸ್ತ್ರಜ್ಞರಾದ ರಾಬರ್ಟ್ ಬ್ರೂಸ್ ಫುಟ್ ಅವರು ಅಭಿಪ್ರಾಯಪಟ್ಟಿದ್ದಾರೆ.

ಮಹಾಕಾವ್ಯ ರಾಮಾಯಣದಲ್ಲಿ ಸೀತೆಯನ್ನು ಹುಡುಕುತ್ತಾ ಹಂಪಿಯ ಬಳಿ ಇರುವ ಕಿಷ್ಕಿಂಧೆಗೆ ಬಂದನು ಎಂಬ ಪ್ರತೀತಿ ಇದೆ. ಮೌರ್ಯರ ಅಶೋಕನ ಶಾಸನಗಳು ಉದೇಗೋಳಂ, ನಿಟ್ಟೂರು ಬಳಿ ಸಿಕ್ಕಿವೆ. ಶಾತವಾಹನರ ಕೊನೆಯ ಅರಸ ಬಹುಶಃ ಪುಲುಮಾಯಿಯ ಅವಧಿಗೆ ಸಂಬಂಧಿಸಿದ ಶಾಸನ ಬಳ್ಳಾರಿಯಲ್ಲಿ ಸಿಕ್ಕಿದೆ. ಕದಂಬರು ಸಂಡೂರಿನ ಬೆಟ್ಟದಲ್ಲಿಯ ಕಾರ್ತಿಕೇಯ ದೇವಸ್ಥಾನವು 'ಸ್ವಾಮಿಮಲೈ' ಎಂದು ಉಲ್ಲೇಖವಾಗಿದೆ. ರಾಷ್ಟ್ರಕೂಟರ

ಮೂರನೆಯ ಕೃಷ್ಣ ಕೋಗಳಿ ೫೦೦ ಪ್ರದೇಶದ ಒಡೆಯನಾಗಿದ್ದನು. ಇದು ಹಡಗಲಿ ಪ್ರದೇಶವನ್ನು ಒಳಗೊಂಡಿತ್ತು ಎಂಬುದಕ್ಕೆ ಕುಡಿತಿನಿಯ ಶಾಸನವು ಸಾಕ್ಷಿಯಾಗಿದೆ. ಕುರುಗೋಡು ಶಾಸನವೊಂದು ನಾಲ್ಕನೇ ಸೋಮೇಶ್ವರನ ಮತ್ತು ನಂತರ ಸಿಂಧವಾಡಿ ರಾಜಮಲ್ಲರು[೭] ಕುರುಗೋಡನ್ನು ಆಳಿದುದಕ್ಕೆ ಸಾಕ್ಷಿಯಾಗಿದೆ.

ಮುಂದುವರೆದು ಬಳ್ಳಾರಿ ಪ್ರಾಚೀನ ಧಾರ್ಮಿಕ ಕೇಂದ್ರವಾದ ಪಂಪಾಕ್ಷೇತ್ರ ಅಥವಾ ಚಂಪಾ ಕ್ಷೇತ್ರ (ಇಂದಿನ ಹಂಪಿ) ವಿಜಯನಗರದ ರಾಜಧಾನಿಯಾಗಿಸಿಕೊಂಡು ಸಂಗಮ, ಸಾಳ್ವ, ತುಳು ಮತ್ತು ಅರವೀಡು ವಂಶಗಳು ಸಾಮ್ರಾಜ್ಯವನ್ನು ಸು. ೨ ಶತಮಾನಕ್ಕೆ ಹೆಚ್ಚು ಕಾಲ ಆಳಿದರು. ವಿಜಯನಗರದ ಅವನತಿಯ ನಂತರ ಪೂರ್ವದ ಉನ್ನತ ಅಧಿಕಾರಿಗಳು ಬಿಜಾಪುರ ಸುಲ್ತಾನರಿಗೆ ಸಾಮಂತರಾಗಿ ಬಳ್ಳಾರಿಯ ವಿವಿಧ ಕೋಟೆ ಪ್ರದೇಶಗಳಾದ ಬಳ್ಳಾರಿ, ಗುಡೇಕೋಟೆ ಹಾಗೂ ಸಂಡೂರು ಭಾಗದ ಪ್ರದೇಶಗಳನ್ನು ವಿವಿಧ ವಂಶಗಳಿಗೆ ಸೇರಿದ ಪಾಳೆಯಗಾರರು ಆಳಿದರು. ಕುರುಬ ಜನಾಂಗಕ್ಕೆ ಸೇರಿದ ಬಾಲದ ಹನುಮಂತಪ್ಪ ನಾಯಕನು ಬಳ್ಳಾರಿ ಕೋಟೆಯನ್ನು ವಶಪಡಿಸಿಕೊಂಡನು. ಹೈದರಾಲಿಯು ಈ ಪ್ರದೇಶದ ಮೇಲೆ ದಾಳಿ ನಡೆಸಿ ಕೋಟೆಯನ್ನು ದುರಸ್ತಿಗೊಳಿಸಿ ತನ್ನ ವಶದಲ್ಲಿಟ್ಟುಕೊಂಡನು. ಸಿದ್ದೋಜಿ ರಾವ್ ಘೋರ್ಪಡೆಯವರಿಂದ ಸ್ಥಾಪನೆಯಾದ ಸಂಡೂರು ಪಾಳೆಯಗಾರಿಕೆಯು ಕ್ರಿ.ಶ. ೧೮೧೮ ರಲ್ಲಿ ಬ್ರಿಟಿಷರೊಂದಿಗೆ ಒಪ್ಪಂದ ಮಾಡಿಕೊಂಡು ಮದ್ರಾಸ್ ಸರ್ಕಾರದ ರಕ್ಷಣೆಯಲ್ಲಿ ೧೯೪೭ ರವರೆಗೂ ಘೋರ್ಪಡೆ ವಂಶ ಆಳ್ವಿಕೆ ನಡೆಸಿತು.

ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಅವಧಿಯಲ್ಲಿ ಬ್ರಿಟಿಷರ ವಿರುದ್ಧ ನಡೆದ ಸಶಸ್ತ್ರ ಹೋರಾಟದಲ್ಲಿ ಬಳ್ಳಾರಿಯು ಪಾತ್ರವಹಿಸಿದ್ದುದು ಗಮನಿಸಬೇಕಾದ ಸಂಗತಿಯಾಗಿದೆ. ಬಳ್ಳಾರಿ ಮತ್ತು ಹರಪನಹಳ್ಳಿ ತಾಲ್ಲೂಕುಗಳಲ್ಲಿ ತಹಸ್ಸೀಲ್ದಾರನಾಗಿ ಕೆಲಸ ಮಾಡಿದ್ದ ಮುಂಡರಿಗಿ ಭೀಮರಾವ್ ನಿವೃತ್ತಿ ಘೋಷಿಸಿ ೧೫೦ ಯುವಕರನ್ನು ಸಂಘಟಿಸಿದನು. ೧೮೮೫ ರಲ್ಲಿ ಮುಂಬೈಯಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದಲ್ಲಿ ಕರ್ನಾಟಕದಿಂದ ಭಾಗವಹಿಸಿದ್ದ ಏಕ ಮಾತ್ರ ವ್ಯಕ್ತಿ ಮೈಲಾರ ಮಹದೆವಪ್ಪನವರು ಬಳ್ಳಾರಿಯವರು ಎಂಬುದು ಹೆಮ್ಮೆಯ ವಿಷಯ. ೧೯೦೫ ರಲ್ಲಿ ಬಾಲಗಂಗಾಧರ ತಿಲಕ್, ೧೯೩೪ ರಲ್ಲಿ ಗಾಂಧೀಜಿಯವರು ಬಳ್ಳಾರಿಗೆ ಭೇಟಿ ನೀಡಿ ಸ್ವಾತಂತ್ರ್ಯಕ್ಕೆ ಕರೆನೀಡಿದರು. ಹೀಗಾಗಿ ಬಾದನಹಟ್ಟಿ ವೆಂಕೋಬರಾವ್, ಬೆಲ್ಲದ ಚೆನ್ನಪ್ಪ, ಗುರುನಾಥ ಶೆಟ್ಟರು, ಅನಂತಾಚಾರ್, ಡಿ. ಆರ್. ನಾಗನಗೌಡ ಮತ್ತು ಅಲ್ಲಂ ಕರಿಬಸಪ್ಪ ಅವರು ಸ್ಥಳೀಯ ಸ್ವತಂತ್ರ ಹೋರಾಟಗಾರರಾಗಿದ್ದರು. ಇವರಲ್ಲಿ ಕೆಲವರು ೧೯೪೦ ರ ಸತ್ಯಾಗ್ರಹ ಹೋರಾಟಕ್ಕೆ ಸೆರೆಮನೆ ಸೇರಿದ್ದರು.

ಹೀಗೆ ಇತಿಹಾಸ ಪೂರ್ವಕಾಲದಿಂದ ಹಿಡಿದು ಏಕೀಕರಣದ ಇಂದಿನವರೆಗೂ ಕರ್ನಾಟಕದಲ್ಲಿ ಅಷ್ಟೇ ಅಲ್ಲ ಅಖಂಡ ಭಾರತ ವ್ಯಾಪ್ತಿಯಲ್ಲಿಯೂ ಬಳ್ಳಾರಿಯು ಎದ್ದುಕಾಣುವ ಹೆಸರಾಗಿದೆ.

**೨.೪ ಪೌರಾಣಿಕ ಹಿನ್ನೆಲೆ**

ಬಳ್ಳಾರಿ ಜಿಲ್ಲೆಯು ಅನೇಕ ಪುರಾಣ ಸಂಬಂಧಿ ಮಾಹಿತಿಗೆ ನಿಖರವೆಂಬಂತೆ, ಅದರಲ್ಲಿ ಮುಖ್ಯವಾಗಿ ರಾಮಾಯಣದ ಬೆನ್ನೆಲುಬು ಎಂಬಷ್ಟರ ಮಟ್ಟಿಗೆ ಧಾರ್ಮಿಕ ನಂಬಿಕೆಯನ್ನು ಪಡೆದಿದೆ. ಶಿವಪಾರ್ವತಿಯರ ವಿವಾಹ, ತಪಸ್ಸು, ಮನ್ಮಥನು ಸುಟ್ಟು ಭಸ್ಮವಾದದ್ದು ಇಲ್ಲಿನ ಹಂಪಿಯಲ್ಲಿಯೇ ಎಂದು ನಂಬಲಾಗಿದೆ. ಪಂಪಾಂಬಿಕೆಯ ತವರು ಮನೆ ಹೊಸಪೇಟೆಯ ಚಿಲಕನಹಟ್ಟಿಯಾಗಿತ್ತೆಂದು ಪರಿಭಾವಿಸಲಾಗುತ್ತದೆ. ಇಂದಿಗೂ ಈ ಊರಿನ ಜನರು ಹಂಪೆಯ ಜಾತ್ರೆಯ ದಿನವನ್ನು ನಿಶ್ಚಿತಾರ್ಥ ಹಾಗೂ ಮದುವೆಯ ದಿನವನ್ನಾಗಿ ಆಚರಿಸುತ್ತಾರೆ.

ರಾಮಾಯಣದಲ್ಲಿ ಬರುವ ಹಂಪೆಯ ಕಿಷ್ಕಿಂಧೆಯು ಪ್ರಮುಖ ಸ್ಥಳವಾಗಿದೆ. ರಾಮನು ಸೀತೆಯನ್ನು ಹುಡುಕುತ್ತಾ ಈ ಭಾಗಕ್ಕೆ ಬಂದಾಗ ಇಲ್ಲಿ ವಾಲಿ, ಸುಗ್ರೀವ ಜಾಂಬವಂತ ಮೊದಲಾದ ವಾನರರು ಇಲ್ಲಿ ವಾಸವಾಗಿದ್ದರು ಎಂದು ತಿಳಿದುಬರುತ್ತದೆ. ರಾಮನು ಹದಿನಾಲ್ಕು ವರ್ಷ ವನವಾಸ ಸಮಯದಲ್ಲಿ ಸೀತೆಯನ್ನು

ರಾವಣನು ಕದ್ದೊಯ್ದು ಮೇಲೆ ಹಂಪೆಯ ಕಿಷ್ಕಿಂಧೆ ಸ್ಥಳಕ್ಕೆ ಬಂದಿದ್ದನೆಂಬ ಬಗ್ಗೆ ಪುರಾಣಗಳು ತಿಳಿಸುತ್ತವೆ. ಸೀತೆಯ ಸೆರಗಿನ ಗುರುತು ನಿತ್ಯವೂ ರಾಮಾಯಣವನ್ನು ನೆನಪಿಸಿದರೆ ಭೂ ವಿಜ್ಞಾನಿಗಳು ಇದನ್ನು ಲಾವಾರಸದ ಗುರುತು ಎಂದು ತಿಳಿಸಿದ್ದಾರೆ. ಇಲ್ಲಿನ ಕಿಷ್ಕಿಂಧೆಯನ್ನು ಮತ್ತು ಅಲ್ಲಿರುವ ಬೆಟ್ಟವನ್ನು ಜಂಬೂದ್ವೀಪ ಹಾಗೂ ಅಂಜನಾದ್ರಿ ಬೆಟ್ಟ ಎಂದು ಗುರುತಿಸಲಾಗುತ್ತಿದೆ.

ಮಹಾಭಾರತಕ್ಕೆ ಸಂಬಂಧಿಸಿದಂತೆ ಹೆಚ್ಚು ಘಟನೆಗಳು ಜರುಗಿಲ್ಲವಾದರೂ ಹೊಸಪೇಟೆ ನಾಗೇನಹಳ್ಳಿಯಲ್ಲಿ ಪಾಂಡವರು ವಾಸವಾಗಿದ್ದರೆಂದು ತಿಳಿಯುತ್ತದೆ. ವಿರಾಟಪರ್ವದ ದಿನದಲ್ಲಿ ಅರ್ಜುನನು ಆಯುಧಗಳನ್ನು ಬನ್ನಿ ಗಿಡದಲ್ಲಿಟ್ಟು ಬಂದಿದ್ದನೆಂದು ಪುರಾಣಗಳು ತಿಳಿಸುತ್ತವೆ. ಈ ಕಾಲದಲ್ಲಿಯೇ ಪಂಪಾಸರೋವರವನ್ನು ಹಾದು ಹೋದರೆಂಬುದಾಗಿ ಐತಿಹ್ಯಗಳು ತಿಳಿಸುತ್ತವೆ.

### ೨.೫. ಧಾರ್ಮಿಕ ಆಚರಣೆಗಳು ಮತ್ತು ಸಂಪ್ರದಾಯಗಳು

ಕರ್ನಾಟಕದೆಲ್ಲೆಡೆಗೂ ಆಚರಿಸುವ ಹಬ್ಬ ಮತ್ತು ಉತ್ಸವಗಳನ್ನು ಇಲ್ಲಿಯೂ ಆಚರಿಸಿದರೂ ಕೆಲವೊಂದು ವಿಶಿಷ್ಟವಾದ ಗ್ರಾಮದೇವತೆಯ ಆಚರಣೆಗಳಿವೆ. ಮೊದಲನೆಯದಾಗಿ ಬಳ್ಳಾರಿ ದುರುಗಮ್ಮನ ಜಾತ್ರೆಯನ್ನು ಹೆಸರಿಸಬಹುದಾಗಿದೆ. ಇಲ್ಲಿ ಜಾತ್ರೆಯ ಎರಡನೆ ದಿನ 'ಸಿಡಿ' ಆಚರಣೆಯನ್ನು ಮಾಡಲಾಗುತ್ತದೆ. ಈ ಆಚರಣೆಯು ರುದ್ರ ಭಯಾನಕವಾಗಿರುತ್ತದೆ. ದುರ್ಗಮ್ಮನ ದೇವಸ್ಥಾನದಲ್ಲಿರುವ ದೇವತೆಯು ಶಾಸನಗಳಲ್ಲಿ ಉಲ್ಲೇಖವಾಗಿರುವಂತೆ ಬಳರಿ ದೇವತೆಯೇ ಆಗಿರುವಳೆಂದು ನಂಬಲಾಗಿದೆ. ಬಳ್ಳಾರಿಯ ದುರ್ಗಾದೇವಾಲಯದ ಅರ್ಚಕರು ಗಾಣಿಗ ಮನೆತನದವರೇ ಆಗಿದ್ದಾರೆ. ಅವರಿಂದ ಸಿಕ್ಕ ಮಾಹಿತಿಯ ಪ್ರಕಾರ, ಅರ್ಚಕರ ಪೂರ್ವಜರಲ್ಲಿ ಒಬ್ಬರಿಗೆ ಕನಸಿನಲ್ಲಿ 'ಬಳರಿ' ದೇವತೆ ಬಂದು ತಾನು ಊರಹೊರಗಿನ ಬನದಲ್ಲಿ ನೆಲೆ ನಿಂತಿರುವೆ ಎಂದು ತಿಳಿಸಿದಳಂತೆ. ಒಮ್ಮೆ ಆ ಮೂಲ ಪುರುಷನಿಗೆ ದರ್ಶನ ನೀಡಿ ಆ ಗುಡ್ಡದಿಂದ ಜಿಗಿದು ಈಗಿರುವ ಸ್ಥಳದಲ್ಲಿ ಮಾಯವಾದಳಂತೆ. ಇದರಂತೆ ಒಬ್ಬ ಮುದುಕಿಯು ಅಸಹ್ಯವಾಗಿದ್ದು ತಲೆಕೂದಲು ಕೆದರಿಕೊಂಡು ಮರದ ಕೆಳಗೆ ಕುಳಿತಿರುತ್ತಾಳೆ. ಇದನ್ನು ಗಮನಿಸಿದ ಜನತೆ ತುಚ್ಛವಾಗಿ ಬಯ್ಯುತ್ತಾರೆ. ಅರ್ಚಕರಿಗೆ ಸಂಬಂಧಿಸಿದ ವ್ಯಕ್ತಿಯೊಬ್ಬನನ್ನು ಕರೆದ ಮುದುಕಿ ತಲೆಯಲ್ಲಿದ್ದ ಹೇನನ್ನು ತೆಗೆಯಬೇಕೆಂದು ಸೂಚಿಸಿದಳಂತೆ. ಆಗ ಆ ವ್ಯಕ್ತಿ ಬಂದು ತಲೆಗೆ ಕೈ ಹಾಕಿ ಬಗಿಯುವಾಗ ಕೂದಲಲ್ಲಿ ಕಣ್ಣು ನೋಡಿ ಬೆಚ್ಚಿ ಬೀಳುವಳು. ಅನಂತರ ರಾತ್ರಿ ವೇಳೆಯಲ್ಲಿ ಮಾದಿಗನ ಜೊತೆಯಲ್ಲಿ ಮಲಗಿ ಅವನ ಹೊಟ್ಟೆ ಬಗೆದು ರಕ್ತ ಕುಡಿದು ಅಲ್ಲಿಂದ ಹೊರಬರುತ್ತಾಳೆ. ಪೂರ್ವಕ್ಕೆ ಮುಖಮಾಡಿ ಹೊರಟಿರುವ ಬಳರಿಗೆ ಬಳೆ ಮಾರುವವನು ಎದುರಾಗುತ್ತಾನೆ. ಅವನಿಂದ ಬಳೆಹಾಕಿಸಿಕೊಂಡು ಪೂರ್ವ ದಿಕ್ಕಿಗೆ ಮುಖ ಮಾಡಿ ಹೊರಟು ಹೋದಳು. ಇದರಿಂದಲೇ ಬಳ್ಳಾರಿ ದುರ್ಗಮ್ಮನ ಗುಡಿಯಲ್ಲಿ ಬಳರಿ ದೇವತೆಯ ಬೆನ್ನಿಗೆ ಪೂಜೆ ಮಾಡಲಾಗುತ್ತದೆ ಎಂದು ತಿಳಿಸಿದ್ದಾರೆ. ಇಲ್ಲಿ ಮಾದಿಗನನ್ನು ಕೊಂದ ಸಂಕೇತದಿಂದಲೇ ದುರ್ಗಿಯ ಶಿಲ್ಪದಲ್ಲಿ ಕಾಲಿನ ಬಳಿಗೂಗೆಯ ಚಿತ್ರವಿದೆ. ಗೂಬೆಯು ಸಾವಿನ ಸುದ್ದಿಯನ್ನು ತರುವ ಪಕ್ಷಿ ಎಂಬ ನಂಬಿಕೆ ಜನರಲ್ಲಿದೆ. ಅದು ಬಂದು ನಾಡೊಳಗೆ ಅರಚಿಕೊಂಡ ಕೆಲವು ದಿನಗಳಲ್ಲೆ ಯಾರಾದರೂ ಸಾಯುವರೆಂಬ ನಂಬಿಕೆಯಿದೆ. ಸ್ವತಃ ದುರ್ಗಿಯು ಸಾವನ್ನು ತರುವ ದೇವತೆಯಾಗಿದ್ದರಿಂದಲೂ ಅವಳ ಪಕ್ಕಕ್ಕೆ ಗೂಬೆ ಸಂಕೇತ ರೂಪವಾಗಿರಬಹುದು. ಅಲ್ಲದೆ ದುರ್ಗಮ್ಮನ ಗುಡಿಯ ಅರ್ಚಕ ಹೇಳುವ ಮೌಖಿಕ ವಿವರಗಳ ಪ್ರಕಾರ, ದುರ್ಗಮ್ಮ ದೇವತೆಯು ಪೂಜೆಗೆ ಬಂದ ಭಕ್ತರಲ್ಲಿ ಒಬ್ಬ ಬಾಲಕನನ್ನು ಆಹಾರವಾಗಿ ಸೇವಿಸುತ್ತಿರುವುದನ್ನು ಎದುರಿಗಿರುವ ಮಲ್ಲೇಶದೇವನು ಗಮನಿಸಿ ನೀನು ಹಿಗೆ ಪ್ರತಿ ದಿನವೂ ಭಕ್ತರನ್ನು ಸಾಯಿಸುತ್ತಾ ಹೋದರೆ ಜನ ಬದುಕಿರಲಾರರೆಂದು ತರಾಟೆಗೆ ತೆಗೆದುಕೊಂಡಿದ್ದಕ್ಕೆ ಅವನಿಗೆ ಕಾಣಿಸದಂತೆ ಪೂರ್ವಕ್ಕೆ ಬೆನ್ನು ಮಾಡಿ ನರ ಮಾಂಸ ಸೇವಿಸಲು ತೊಡಗಿದಳು. ಅವತ್ತಿನಿಂದ ದುರ್ಗಿಯ ಬೆನ್ನಿಗೆ ಮತ್ತು ಹುತ್ತಿಗೆ ಪೂಜೆ ಮಾಡುತ್ತಿರುವುದಾಗಿ ತಿಳಿದು

ಬರುತ್ತದೆ. ಈಕೆ ಉಗ್ರಸ್ವರೂಪದವಳಾದ್ದರಿಂದ ಮೊದಲಿಗೆ ಅರ್ಚಕರು ತೆರೆಹಾಕಿ ಪೂಜೆ ಮಾಡುವ ಪದ್ಧತಿ ರೂಢಿಯಲ್ಲಿದೆ.

ಈ ಭಾಗದಲ್ಲಿ ಮೊಹರಂ ವಿಶಿಷ್ಟ ಆಚರಣೆಯಾಗಿ ರೂಪುಗೊಂಡಿದೆ. ಇದಕ್ಕೆ ಶತಮಾನಗಳ ಇತಿಹಾಸವೇ ಇದೆ. ಹಿಂದು ಮತ್ತು ಮುಸ್ಲಿಮರು ಇಬ್ಬರೂ ಕೂಡಿಯೇ ಈ ಉತ್ಸವವನ್ನು ಆಚರಿಸಲಾಗುತ್ತದೆ. ಮೂಲತಃ ಶೋಕಾಚರಣೆಯ ಉತ್ಸವಾದ ಈ ಆಚರಣೆಯಲ್ಲಿ ಪ್ರಜ್ಞಾವಂತ ಮುಸ್ಲಿಮರು ಶೋಕ ಆಚರಿಸಿದರೆ, ಮುಸ್ಲಿಮೇತರರು ಆ ಆಚರಣೆಯಲ್ಲಿ ಭಕ್ತಿ ಶ್ರದ್ಧೆಗಳಿಂದ ಪಾಲ್ಗೊಳ್ಳುವುದಲ್ಲದೆ ಅದಕ್ಕೊಂದು ಉತ್ಸವದ ರೂಪ ನೀಡಿರುವರು. ವಿಶಿಷ್ಟವೆಂದರೆ ಮುಸ್ಲಿಮರೇ ಇಲ್ಲದ ಬಳ್ಳಾರಿ ತಾಲ್ಲೂಕಿನ ಅಸಂಖ್ಯಾತ ಹಳ್ಳಿಗಳಲ್ಲಿ ಈ ಆಚರಣೆಯನ್ನು ಹಿಂದುಗಳೇ ಆಚರಿಸುವುದು. ಇಲ್ಲಿ ಪೌರೋಹಿತ್ಯವನ್ನು ಹಿಂದುಗಳೇ ವಹಿಸುವುದು ಗಮನಾರ್ಹ ಸಂಗತಿಯಾಗಿದೆ. ಅಲ್ಲದೆ ಪಂಜಾಗಳ ಮೆರವಣಿಗೆ ದೇವರು ಹೊಳೆಗೆ ಹೋಗುವುದು ಸಂದರ್ಭದಲ್ಲಿ, ದೇವರ ಪೆಟ್ಟಿಗೆಯ ಮೆರವಣಿಗೆ ತಾಜಿಯಾದ ಮೆರವಣಿಗೆ ಸಂದರ್ಭದಲ್ಲಿ ಅಲಾಯಿ ಕುಣಿಯುವಾಗ ಹಿಂದುಗಳ ನಡುವೆಯೇ ಗಲಭೆಗಳುಂಟಾಗುವುದರಿಂದ ಎಷ್ಟೋ ಸಲ ಈ ಉತ್ಸವವನ್ನು ನಿಷೇಧಿಸಬೇಕಾದ ಸಂದರ್ಭಗಳೂ ಏರ್ಪಟ್ಟಿವೆ.

ಹಾಗೆಯೇ ಸೂಫಿ ಸಂತರ ಪುಣ್ಯತಿಥಿಗಳಾದ ಉರುಸ್ ಆಚರಣೆಯೂ ಇಲ್ಲಿದೆ. ಮಾನಸಿಕ ಅಸ್ವಸ್ಥೆಯಿಂದ ನರಳುತ್ತಿರುವವರು ಅದರಿಂದ ಸ್ವಸ್ಥರಾಗಲು ಮೊಹರಂನ ಪಂಜಾಗಳನ್ನು ಕೂಡಿಸುವ ಮಸೀದಿಗೋ ಇಲ್ಲವೇ ಹತ್ತಿರದ ದರ್ಗಾಕ್ಕೋ ಹೋಗುವ ಪರಿಪಾಟವಿದೆ.

**೨.೬. ಭಾಷಿಕ ಅಂಶಗಳು**

ಭಾಷೆಯೆಂಬುದು ನಿಂತ ನೀರಲ್ಲ, ಅದು ಚಲನಶೀಲವಾದದ್ದು. ಪ್ರತಿಯೊಂದು ಪ್ರದೇಶದ ಭಾಷೆಯು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತದೆ. ಪ್ರತಿ ೨೦ ರಿಂದ ೩೦ ಕಿ.ಮೀ. ನಂತರ ಭಾಷೆ ಭಿನ್ನವಾಗುತ್ತದೆ ಎಂಬುದು ಭಾಷಾ ಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. ಬಳ್ಳಾರಿ ಜಿಲ್ಲೆಯ ಭಾಷೆಯು ಗ್ರಾಮೀಣ ಸೊಗಡಿನಿಂದ ತುಂಬಿದ್ದು ಧಾರವಾಡ, ಮೈಸೂರು, ಬೆಳಗಾಂ ಮತ್ತು ಮಂಡ್ಯ ಈ ಜಿಲ್ಲೆಗಳಿಗಿಂತ ವಿಶಿಷ್ಟವಾದ ನೆಲೆಯನ್ನು ಹೊಂದಿದೆ. ಬಳ್ಳಾರಿ ಪ್ರದೇಶದ ಕನ್ನಡದ ಆಡುನುಡಿಯು ಇತರೆ ಭಾಗಗಳ ಕನ್ನಡಕ್ಕಿಂತ ಭಿನ್ನವಾಗಿದೆ. ಭಾಷೆ ಎಂಬುದು ಒಂದು ಪ್ರಾಂತ್ಯ, ಒಂದು ಸಮುದಾಯ ಹಾಗೂ ಒಂದು ಇಡೀ ಸಂಸ್ಕೃತಿಗೆ ಸೇರಿದ್ದೇ ವಿನಹಃ ಕೇವಲ ಒಬ್ಬ ವ್ಯಕ್ತಿಗೆ ಸೀಮಿತವಲ್ಲ. ಅದು ಕಾಲದಿಂದ ಕಾಲಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ ಬದಲಾಗುತ್ತದೆ.

ದ್ರಾವಿಡ ಭಾಷಾ ವರ್ಗಕ್ಕೆ ಸೇರಿದವುಗಳಲ್ಲಿ ಕನ್ನಡ, ತೆಲುಗು ಭಾಷೆಗಳು ಮುಖ್ಯವಾಗಿವೆ. ಕನ್ನಡ ದಕ್ಷಿಣ ದ್ರಾವಿಡ ಭಾಷಾ ವರ್ಗಕ್ಕೆ ಸೇರಿದ ಭಾಷೆಯಾಗಿದ್ದು, ತೆಲುಗು ಮಧ್ಯದ್ರಾವಿಡ ಭಾಷಾ ವರ್ಗಕ್ಕೆ ಸೇರಿದ ಭಾಷೆಯಾಗಿದೆ. ಕರ್ನಾಟಕದಲ್ಲಿ ಬಹುಸಂಖ್ಯಾತರ ಭಾಷೆಯಾಗಿ ಕನ್ನಡ, ಉರ್ದು ಭಾಷೆಗಳು ಸೇರಿದರೆ, ಮೂರನೆಯ ಸ್ಥಾನವನ್ನು ತೆಲುಗು ಭಾಷೆ ಪಡೆದುಕೊಂಡಿದೆ. ಕರ್ನಾಟಕದ ಗಡಿ ಭಾಗಗಳಲ್ಲಿ ತೆಲುಗು ಭಾಷೆಯನ್ನು ಹೆಚ್ಚಾಗಿ ಬಳಸುವವರೂ ಇದ್ದಾರೆ. ಪ್ರಥಮವಾಗಿ ತೆಲುಗು ಭಾಷೆಯ ಹೆಚ್ಚು ಪ್ರಭಾವ ಕೋಲಾರ ಜಿಲ್ಲೆಯು ಪಡೆದರು ನಂತರದ ಸ್ಥಾನವನ್ನು ಬಳ್ಳಾರಿ ಜಿಲ್ಲೆಯು ಪಡೆದಿದೆ. ಇತರೆ ಜಿಲ್ಲೆಗಳಲ್ಲಿ ಇದರ ಬಳಕೆ ಸ್ವಲ್ಪ ಕಡಿಮೆಯಿದೆ ಎನ್ನಬಹುದು.

ಭಾರತದಲ್ಲಿ ಹಿಂದಿಯನ್ನು ಬಿಟ್ಟರೆ ಹೆಚ್ಚು ಬಳಕೆಯಲ್ಲಿರುವುದು ತೆಲುಗು ಭಾಷೆ. ಕನ್ನಡ, ತೆಲುಗು ಭಾಷೆಗಳು ಹೆಚ್ಚು ಸಮಾನತೆ ಪಡೆದಿವೆ. ಬಳ್ಳಾರಿ ಜಿಲ್ಲೆಯಲ್ಲಿ ಕನ್ನಡದ ನಂತರದ ಸ್ಥಾನವನ್ನು ತೆಲುಗು ಭಾಷೆ ಆಕ್ರಮಿಸಿದೆ. ಇಲ್ಲಿ ಆಂಧ್ರದಿಂದ ಬಂದ ವಲಸಿಗರ ತೆಲುಗು ಮಾತೃಭಾಷೆಯಾದರೆ, ಕನ್ನಡವನ್ನು ವ್ಯವಹಾರಿಕ ಭಾಷೆಯಾಗಿ ಬಳಸುತ್ತಾರೆ. ಬಹುಸಂಖ್ಯಾತ ಕನ್ನಡಿಗರು ವ್ಯವಹಾರದಲ್ಲಿ ಕನ್ನಡ ಬಳಸುವುದರಿಂದ

ಅನಿವಾರ್ಯವಾಗಿ ತೆಲುಗರು ಕನ್ನಡ ಭಾಷೆಯನ್ನು ಕಲಿಯುವ, ಮಾತನಾಡುವ ಒತ್ತಡ ಇದ್ದೇ ಇದೆ. ಇಲ್ಲಿ ಕನ್ನಡ ತೆಲುಗು ಭಾಷೆಗಳು ಸಾಮಾನ್ಯವಾಗಿ ಬೆರೆತಿವೆ ಎಂಬುದು ಸ್ಪಷ್ಟವಾಗಿ ಗೋಚರಿಸುತ್ತವೆ.

ಜಿಲ್ಲೆಯಲ್ಲಿ ನೆಲೆಸಿರುವ ತೆಲುಗರು ದ್ವಿಭಾಷಿಕರಾಗಿದ್ದು, ಕನ್ನಡ ತೆಲುಗು ಎರಡೂ ಭಾಷೆಗಳಲ್ಲಿ ವ್ಯವಹಾರ ಮಾಡುತ್ತಿದ್ದು ಕನ್ನಡ ಪರಿಸರದಲ್ಲಿ ತೆಲುಗು ರೂಪಗಳನ್ನೇ ಸೇರಿಸಿ ಮಾತಾಡುವ ಭಾಷಿಕ ಪ್ರಕ್ರಿಯೆ ಇಲ್ಲಿದೆ. ಜಿಲ್ಲೆಯಲ್ಲಿ ಸ್ಥಳನಾಮಗಳು ಹಾಗೂ ವ್ಯಕ್ತಿ ನಾಮಗಳ ಮೇಲೂ ತೆಲುಗಿನ ಪ್ರಭಾವ ಬೀರಿದೆ. ವಲಸೆ ಬಂದಿರುವ ತೆಲುಗರು ಅವರ ಕ್ಯಾಂಪುಗಳಿಗೆ ತೆಲುಗು ಹೆಸರುಗಳನ್ನು ಇಟ್ಟುಕೊಂಡಿದ್ದಾರೆ. ಉದಾಹರಣೆಗೆ ಕೋಟೇಶ್ವರ ರಾವ್ ಕ್ಯಾಂಪನ್ನು ಹೆಸರಿಸಬಹುದು.[೮]

ಸಂವಹನ ಮಾಧ್ಯಮಗಳಲ್ಲಿ ಪತ್ರಿಕೆ, ದೂರದರ್ಶನ, ರೇಡಿಯೋಗಳಲ್ಲಿ ಪ್ರಸಾರವಾಗುವ ಕಾರ್ಯಕ್ರಮಗಳನ್ನು ತೆಲುಗರು ಇಷ್ಟಪಟ್ಟು ಕೇಳುತ್ತಾರೆ. ಬಳ್ಳಾರಿ ಜಿಲ್ಲೆ ಒಂದು ದ್ವಿಭಾಷಿಕ ಪ್ರದೇಶವಾಗಿ ಅನೇಕ ಶತಮಾನಗಳ ಕಾಲ ಆಂಧ್ರದ ಕಡಪ, ಕರ್ನೂಲು ಮತ್ತು ಅನಂತಪುರ ಜಿಲ್ಲೆಗಳು ಒಂದೇ ಆಡಳಿತಕ್ಕೆ ಒಳಪಟ್ಟಿದ್ದವು. "ಈ ಪ್ರದೇಶಗಳನ್ನು ಕ್ರಿ.ಶ. ೧೮೦೦ ರಲ್ಲಿ ಹೈದ್ರಾಬಾದ್ ನಿಜಾಮನು ಬ್ರಿಟಿಷರಿಗೆ ನೀಡಿದ್ದರಿಂದ ಇವುಗಳನ್ನು ಸೀಡೆಡ್ ಡಿಸ್ಟ್ರಿಕ್ಟ್ಸ್"[೯] ಎಂದು ಕರೆಯಲಾಗಿದೆ. ಕನ್ನಡ ಹಾಗೂ ತೆಲುಗು ಭಾಷೆಗಳು ಪ್ರಧಾನವಾಗಿ ವ್ಯವಹಾರದಲ್ಲಿವೆ. ಕನ್ನಡಿಗರೆಲ್ಲರಿಗೂ ಸಾಮಾನ್ಯವಾಗಿ ತೆಲುಗು ಗೊತ್ತಿರುತ್ತದೆ ಎನ್ನಬಹುದು. ಈ ಹಿನ್ನೆಲೆಯಲ್ಲಿ ಕನ್ನಡ ಮತ್ತು ತೆಲುಗು ಭಾಷಿಕರನ್ನು ವರ್ಗೀಕರಿಸುವುದು ಕಷ್ಟದ ಕೆಲಸವೇ ಆಗಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಮಾತೃಭಾಷಾ ದೃಷ್ಟಿಯಿಂದ ಕನ್ನಡ, ತೆಲುಗು, ಉರ್ದು, ತಮಿಳು, ಹಿಂದಿ, ಮಲೆಯಾಳಂ, ಮರಾಠಿ ಹಾಗೂ ಲಂಬಾಣಿ ಮುಂತಾದ ಭಾರತೀಯ ಭಾಷಿಕರನ್ನು ಸಹ ಕಾಣಬಹುದಾಗಿದೆ.

ಡಾ. ಕೃಷ್ಣಪರಮೇಶ್ವರ ಭಟ್ ಅವರು ಕೋಲಾರ ಜಿಲ್ಲೆಯ ಭಾಷಿಕ ಪರಿಸರವನ್ನು ನೋಡಬಹುದು. "ತೆಲುಗು ಭಾಷಿಕರು ಕನ್ನಡ ಕಲಿಯುವ ಅವಶ್ಯಕತೆಗಿಂತ ಕನ್ನಡ ಭಾಷಿಕರು ತೆಲುಗನ್ನು ಕಲಿಯುವಂತೆ ಒತ್ತಾಯಿಸುವ ಸನ್ನಿವೇಶವಿದೆಯೆಂದೂ ಕನ್ನಡ ಭಾಷಿಕರ ಒಲವು ಹೆಚ್ಚಾಗಿ ತೆಲುಗಿನ ಕಡೆ ಇದೆ" ಎಂದಿದ್ದಾರೆ. ಈ ಮಾತು ಬಳ್ಳಾರಿ ಜಿಲ್ಲೆಯಲ್ಲಿ ಪೂರ್ಣಪ್ರಮಾಣದಲ್ಲಿಅನ್ವಯವಾಗುವುದರಲ್ಲಿ ಸಂಶಯವೇ ಇಲ್ಲವೆನ್ನಬಹುದು.

**ಕನ್ನಡ ಭಾಷಾ ಪ್ರಬೇಧಗಳ ಮೇಲೆ ತೆಲುಗು ಭಾಷಾ ಪ್ರಭಾವ**[೧]

| ಜಿಲ್ಲೆಗಳು | ತೆಲುಗು | ಜಿಲ್ಲೆಗಳು | ತೆಲುಗು |
|---|---|---|---|
| ಬೀದರ್ | * | ಬೆಂಗಳೂರು ಉತ್ತರ | ** |
| ಗುಲ್ಬರ್ಗಾ | * | ಬೆಂಗಳೂರು ದಕ್ಷಿಣ | ** |
| ಬಿಜಾಪುರ | - | ಮೈಸೂರು | ** |
| ಬೆಳಗಾಂ | - | ಕೊಡಗು | * |
| ರಾಯಚೂರು | * | ಚಾಮರಾಜ ನಗರ | * |
| ಬಳ್ಳಾರಿ | ** | ದಕ್ಷಿಣ ಕನ್ನಡ | - |
| ಕೊಪ್ಪಳ | - | ಉತ್ತರ ಕನ್ನಡ | - |
| ಬಾಗಲಕೋಟ | - | ಶಿವಮೊಗ್ಗ | - |
| ಗದಗ | - | ಮಂಡ್ಯ | * |
| ಚಿತ್ರದುರ್ಗ | ** | ಹಾಸನ | - |

| | | | |
|---|---|---|---|
| ತುಮಕೂರು | ** | ಚಿಕ್ಕಮಗಳೂರು | - |
| ಕೋಲಾರ | *** | ಧಾರವಾಡ | - |
| | | ಉಡುಪಿ | - |
| | | ಹಾವೇರಿ | - |

- ಇಲ್ಲ * ಕಡಿಮೆ **ಸಾಧಾರಣ, ***ಹೆಚ್ಚು

(ಕೃಪೆ: **ಕರ್ನಾಟಕ ಭಾರತಿ,** ವಿಶೇಷ ಸಂಚಿಕೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬)

ಬಳ್ಳಾರಿಯ ವ್ಯವಹಾರಿಕ ಕನ್ನಡ

ಭಾಷೆಯ ಮೂಲ ಸಾಮಾಗ್ರಿ ಧ್ವನಿ. ಮನುಷ್ಯನ ಮುಖವಿವರದಿಂದ ಹೊರಡುವ ಧ್ವನಿಗಳಿಗೆಲ್ಲಾ ಭಾಷೆಯಲ್ಲಿ ಅರ್ಥವಿಲ್ಲ. ಉಚ್ಚಾರಿತ ಧ್ವನಿಗಳಿಗೆ ಮಾತ್ರ ಭಾಷೆಯಲ್ಲಿ ಸ್ಥಾನವಿದೆ. ಮನುಷ್ಯನು ಅಸಂಖ್ಯಾತ ಧ್ವನಿಗಳನ್ನು ಹೊರಡಿಸಬಹುದಾದ ಎಲ್ಲಾ ಧ್ವನಿಗಳನ್ನು ಅವನು ತನ್ನ ಭಾಷೆಯಲ್ಲಿ ಅಥವಾ ಇತರ ಭಾಷೆಗಳಲ್ಲಿ ಅಳವಡಿಸಿಕೊಂಡಿರುವುದಿಲ್ಲ. ಆಡುನುಡಿ ಜೀವಂತ ಭಾಷೆಯ ಒಂದು ಸಹಜ ಲಕ್ಷಣ. ಎಲ್ಲಾ ಭಾಷೆಗಳಿಗೂ ಆಡು ನುಡಿಯೇ ತಾಯಿ.

ಬಳ್ಳಾರಿ ವ್ಯವಹಾರಿಕ ಕನ್ನಡದಲ್ಲಿ ಧ್ವನಿ ನಿಯಮಗಳು ವಿಶಿಷ್ಟವಾಗಿದ್ದು ಕೆಲವು ನಿದರ್ಶನಗಳ ಸಹಿತ ಈ ರೀತಿ ನೋಡಬಹುದು.[೧೦]

ಪದಾಂತ್ಯ ಪರಿಸರದ 'ಎ' ಕಾರವು 'ಇ' ಕಾರವಾಗಿ ಉಚ್ಚರಣೆಯಲ್ಲಿದೆ.

| **ಶಿಷ್ಟಕನ್ನಡ** | **ಬಳ್ಳಾರಿ ಕನ್ನಡ** |
|---|---|
| ಶಾಲೆ | ಸಾಲಿ |
| ಸಜ್ಜೆ | ಸಜ್ಜಿ |
| ಶಾವಿಗೆ | ಸ್ಯಾವಿಗೆ |
| ಎಡೆ | ಎಡಿ |
| ನಡೆ | ನಡಿ |
| ಬರೆ | ಬರಿ |

ಮೇಲಿನ ಕೋಷ್ಟಕದಲ್ಲಿ ನಾವು 'ಶಾಲೆ'ಯೆಂಬ ಶಿಷ್ಟ ಪದವು ಬಳ್ಳಾರಿ ವ್ಯವಹಾರಿಕ ಕನ್ನಡದಲ್ಲಿ 'ಸಾಲಿ ಯಾಗಿ ಉಚ್ಚರಣೆಯಲ್ಲಿದೆ. ಇಲ್ಲಿ ಪದಾಂತ್ಯದ 'ಎ' ಕಾರವು 'ಇ' ಕಾರವಾಗಿದೆ. ಅದೇ ರೀತಿ 'ಸಜ್ಜೆ', 'ಶಾವಿಗೆ', ' ಎಡೆ', 'ನಡೆ' ಮತ್ತು 'ಬರೆ' ಪದಗಳು 'ಸಜ್ಜಿ', 'ಸ್ಯಾವಿಗೆ', 'ಎಡಿ', 'ನಡಿ' ಮತ್ತು 'ಬರಿ'ಯಾಗಿ ಉಚ್ಚಾರಣೆಯಲ್ಲಿರುವುದು ಗಮನಾರ್ಹವಾದ ಧ್ವನಿ ನಿಯಮ.

ಇಲ್ಲಿ ಕೇವಲ ಇ ಕಾರಾಂತ ಪದಗಳು ಮಾತ್ರವಲ್ಲದೆ ಏ ಕಾರದಿಂದ ಅಂತ್ಯಗೊಂಡಿರುವ ಪದಗಳು ಸಹ ಉಚ್ಚಾರಣೆಯಲ್ಲಿವೆ. ಇಲ್ಲಿ ಬಹಳಷ್ಟು ಪದಗಳು ಮೈಸೂರಿನ ಉಪಭಾಷೆಯಂತೆ ಏ ಕಾರಾಂತ ಪದಗಳು ಕಂಡು ಬರುತ್ತವೆ. ಉದಾಹರಣೆಗೆ ಮನೆ, ಎಮ್ಮೆ, ಆನೆ, ಕುದುರೆ, ತೊಗರೆ, ತೆನೆ, ಮಳೆ, ಕಳೆ, ಇರುವೆ, ದ್ಯಾಸೆ, ಮಡಿಕೆ, ಬಾಡಿಗೆ, ಕುಂಟೆ ಇತ್ಯಾದಿ.

ಇಲ್ಲಿ ಬಳ್ಳಾರಿಗೂ-ಮೈಸೂರಿಗೂ ಸಂಬಂಧವಿರುವುದನ್ನು 'ಆನೆ ಬಂತಾನೆ', 'ಯಾವೂರಾನೆ' 'ಮೈಸೂರಾನೆ' ಈ ಹಾಡಿನಲ್ಲಿ ಬಳಕೆಯಾಗಿರುವ ಮೈಸೂರಾನೆ ಪದದಿಂದ ಮೈಸೂರು ಕನ್ನಡ ಪ್ರಭಾವ ಈ ಪ್ರಾಂತ್ಯದ ಕನ್ನಡದ ಮೇಲೆ ಆಗಿದೆ ಎಂಬುದು ಸ್ಪಷ್ಟವಾಗುತ್ತದೆ. ಈ ಹಿನೆಲೆಯಲ್ಲಿ ಬಳ್ಳಾರಿಯ ವ್ಯವಹಾರಿಕ ಕನ್ನಡ ಉಚ್ಚಾರಣೆಯಲ್ಲಿ ಏಕಾರಂತ ಪದಗಳು ಕಂಡುಬರುತ್ತವೆ'

ಪದಾದಿಯ 'ಅ' ಕಾರವು ಬಳ್ಳಾರಿ ವ್ಯವಹಾರಿಕ ಕನ್ನಡದ ಉಚ್ಚಾರಣೆಯಲ್ಲಿ 'ಒ' ಕಾರವಾಗಿದೆ.

| ಶಿಷ್ಟ ಪದ | ಬಳ್ಳಾರಿ ಕನ್ನಡ |
|---|---|
| ಕಲ್ಲು | ಕೊಲ್ಲು |
| ಕಣ್ಣು | ಕೊಣ್ಣು |
| ಕಬ್ಬು | ಕೊಬ್ಬು |
| ಕಪ್ಪೆ | ಕೊಪ್ಪೆ |

ಮೇಲಿನ ನಿದರ್ಶನದಲ್ಲಿ 'ಕ' ಕಾರದಿಂದ ಮುಂದಿನ ಅಕ್ಷರವು ಸಜಾತಿಯ ದ್ವಿತ್ವವಾಗಿದ್ದರೆ 'ಅ' ಕಾರಾವು 'ಒ' ಕಾರವಾಗಿರುವುದು ಸ್ಪಷ್ಟವಾಗಿದೆ ಎಂದು ಡಾ. ಎಸ್. ಎಸ್. ಅಂಗಡಿಯವರು ತಮ್ಮ ಶೋಧನೆ ಕೃತಿಯಲ್ಲಿ ಅಭಿಪ್ರಾಯ ಪಟ್ಟಿದ್ದಾರೆ.

'ಅ' ಕಾರಾದಿಯ ಸಂಬಂಧವಾಚಕಗಳು ಸಂಬೋಧಿಸುವಾಗ ಮಾತ್ರ 'ಯ' ಕಾರವಾಗಿ ಉಚ್ಚಾರಿಸುತ್ತಾರೆ.

| ಶಿಷ್ಟ ಕನ್ನಡ | ಬಳ್ಳಾರಿ ಕನ್ನಡ |
|---|---|
| ಅಪ್ಪ | ಯಪ್ಪ |
| ಅಕ್ಕ | ಯಕ್ಕ |
| ಅವ್ವ | ಯವ್ವ |
| ಅಣ್ಣ | ಯಣ್ಣ |

ಇಲ್ಲಿ ಶಿಷ್ಟ ಕನ್ನಡದ ಸಂಬಂಧ ಸೂಚಕಗಳು ಪದಾದಿ ಪರಿಸರ 'ಅ' ಕಾರವು ಬಳ್ಳಾರಿ ವ್ಯವಹಾರಿಕ ಕನ್ನಡದಲ್ಲಿ 'ಯ' ಕಾರವಾಗಿ ಉಚ್ಚಾರಣೆಯಲ್ಲಿದೆ. ಈ ಧ್ವನಿ ಪ್ರಕ್ರಿಯೆ ಸಾಮಾನ್ಯವಾಗಿ ಅನಕ್ಷರಸ್ಥರು, ಕೆಳವರ್ಗದ ಜನಾಂಗದವರ ಉಚ್ಚಾರಣೆಯಲ್ಲಿ ಕಂಡುಬರುತ್ತದೆ. ಇದು ಬಳ್ಳಾರಿ ವ್ಯವಹಾರಿಕ ಕನ್ನಡದ ಉಚ್ಚಾರಣೆಯ ವೈಶಿಷ್ಟ್ಯವನ್ನು ನಿರ್ಧರಿಸುವ ಅಂಶವಾಗಿದೆ.

ಪದಾದಿ 'ಅ' ಕಾರವು 'ಉ' ಕಾರವಾಗಿದೆ.

| ಶಿಷ್ಟ ಕನ್ನಡ | ಬಳ್ಳಾರಿ ಕನ್ನಡ |
|---|---|
| ಹೂವು | ಊವ |
| ಹುಲಿ | ಉಲಿ |
| ಹುಟ್ಟಿಬಂದ | ಉಟ್ಟಿ ಬಂದ |

ಮೇಲಿನ ನಿದರ್ಶನದಲ್ಲಿ ಕೊಟ್ಟಿರುವ ಉದಾಹರಣೆಗಳಲ್ಲಿ `ಹ' ಕಾರವು ಲೋಪವಾಗಿದೆ. ಇದು ಬಳ್ಳಾರಿ ವ್ಯವಹಾರಿಕ ಕನ್ನಡದ ಮತ್ತೊಂದು ಉಚ್ಚಾರಣೆಯ ವೈಶಿಷ್ಟ್ಯವಾಗಿದೆ.

ಇದು ಸಹ ಬಹಳ ಮುಖ್ಯವಾಗಿ ಮೂರಕ್ಷರ ಪದಗಳು ಉಚ್ಚಾರಣೆಯಲ್ಲಿ `ಕ' ಕಾರಕ್ಕೆ ಬದಲು `ಳ' ಕಾರ ಬಂದು ವ್ಯಂಜನ ಗುಚ್ಛಗಳಾಗಿ ಉಚ್ಚಾರಣೆಯಲ್ಲಿದೆ.

| ಶಿಷ್ಟ ಕನ್ನಡ | ಬಳ್ಳಾರಿ ಕನ್ನಡ |
|---|---|
| ಹೂವು | ಊವ |
| ಹುಲಿ | ಉಲಿ |
| ಹುಟ್ಟಿಬಂದ | ಉಟ್ಟಿ ಬಂದ |

ಮೇಲಿನ ನಿದರ್ಶನದಲ್ಲಿ ಕೊಟ್ಟಿರುವ ಉದಾಹರಣೆಗಳಲ್ಲಿ 'ಹ' ಕಾರವು ಲೋಪವಾಗಿದೆ. ಇದು ಬಳ್ಳಾರಿಯ ವ್ಯವಹಾರಿಕ ಕನ್ನಡದ ಮತ್ತೊಂದು ಉಚ್ಚಾರಣಾ ವೈಶಿಷ್ಟ್ಯವಾಗಿದೆ.

ಇದು ಸಹ ಬಹಳ ಮುಖ್ಯವಾಗಿ ಮೂರಕ್ಷರ ಪದಗಳು ಉಚ್ಚಾರಣೆಯಲ್ಲಿ ಕ ಕಾರಕ್ಕೆ ಬದಲುಳ್ಳ ಳ ಕಾರ ಬಂದು ವ್ಯಂಜನ ಗುಚ್ಛಗಳಾಗಿ ಉಚ್ಚಾರಣೆಯಲ್ಲಿದೆ.

| ಶಿಷ್ಟ ಕನ್ನಡ | ಬಳ್ಳಾರಿ ಕನ್ನಡ |
|---|---|
| ಕುರುಡ | ಕುಳ್ಡ |
| ಕರಡಿ | ಕಳ್ಡಿ |
| ಬುರುಡೆ | ಬುಳ್ಡಿ |
| ಎರಡು | ಎಳ್ಡು |

ಮಹಾಪ್ರಾಣ ವ್ಯಂಜನಗಳು ಉಚ್ಛಾರಣೆಯಲ್ಲಿ ಲೋಪವಾಗಿವೆ.

| ಶಿಷ್ಟ ಕನ್ನಡ | ಬಳ್ಳಾರಿ ಕನ್ನಡ |
|---|---|
| ಖರ್ಚು | ಕರ್ಚು |
| ಛತ್ರಿ | ಚತ್ರಿ |
| ವಿದ್ಯಾಭ್ಯಾಸ | ಇದ್ಯಾಬ್ಯಾಸ |
| ಭಾಷೆ | ಬಾಸೆ |

ಒಂದು ಸ್ವರಕ್ಕೆ ಬದಲಾಗಿ ಮತ್ತೊಂದು ಸ್ವರ ಬರುವುದು

| ಶಿಷ್ಟ ಕನ್ನಡ | ಬಳ್ಳಾರಿ ಕನ್ನಡ |
|---|---|
| ಬಿಡು | ಬುಡು |
| ಮುಖ | ಮಕ |
| ಕಬ್ಬಿಣ | ಕೆಬ್ಬಣ |

ಒಂದು ವ್ಯಂಜನಕ್ಕೆ ಬದಲಾಗಿ ಮತ್ತೊಂದು ವ್ಯಂಜನ ಬರುವುದು

| **ಶಿಷ್ಟ ಕನ್ನಡ** | **ಬಳ್ಳಾರಿ ಕನ್ನಡ** |
|---|---|
| ನೋಟು | ಲೋಟು |
| ಜನ್ಮ | ಜಲ್ಮ |
| ವ್ಯಸನ | ಯಸನ |

ಉಚ್ಚಾರಣೆಯಲ್ಲಿ ಪದ ಮಧ್ಯ ಅಕ್ಷರ ಲೋಪ ಬರುವುದು

| **ಶಿಷ್ಟ ಕನ್ನಡ** | **ಬಳ್ಳಾರಿ ಕನ್ನಡ** |
|---|---|
| ಸೋಮವಾರ | ಸೋಮಾರ |
| ಅಮವಾಸ್ಯೆ | ಅಮಾಸೆ |
| ಸಹಾಯ | ಸಾಯ |

ಕನ್ನಡದ ಸ್ವೀಕರಣ ಪದಗಳಲ್ಲಿ ಇ ಕಾರವಾಗಿ ಉಚ್ಚಾರಣೆಯಲ್ಲಿದೆ.

| **ಶಿಷ್ಟ ಕನ್ನಡ** | **ಬಳ್ಳಾರಿ ಕನ್ನಡ** |
|---|---|
| ವಿಮಾನ | ಇಮಾನ |
| ವಿಷ | ಇಷ |
| ವಿಧಿ | ಇದಿ |
| ವಿಚಾರ | ಇಚಾರ |
| ವಿರುಪಾಕ್ಷಿ | ಇರುಪಾಕ್ಷಿ |

ಚಕಾರವು ಲೋಪವಾಗಿ 'ಸ' ಕಾರ ಉಚ್ಚಾರಣೆಯಲ್ಲಿದೆ.

| **ಶಿಷ್ಟ ಕನ್ನಡ** | **ಬಳ್ಳಾರಿ ಕನ್ನಡ** |
|---|---|
| ಚೆಂಡು | ಸೆಂಡು |
| ಚಾಳಿ | ಸಾಳಿ |
| ಚೀಲ | ಸೀಲ |
| ಚಿಂತೆ | ಸಿಂತೆ |

ಕನ್ನಡ ಭಾಷೆಯಲ್ಲಿ 'ಎ' ಕಾರಾಂತ ಪದಗಳು ಕಂಡುಬರುವುದು. ಕನ್ನಡ ಭಾಷೆಯ ಧ್ವನಿ ನಿಯಮ ಗಮನಿಸಿದರೆ, ತೆಲುಗು ಭಾಷೆಯಲ್ಲಿ 'ಅ' ಕರಾಂತ, ಪದಗಳು ತೆಲುಗು ಭಾಷೆಯ ಧ್ವನಿ ನಿಯಮವಾಗಿದೆ. ಹೀಗಾಗಿ ಬಳ್ಳಾರಿ ವ್ಯವಹಾರಿಕ ಕನ್ನಡ ಉಚ್ಚಾರಣೆಯಲ್ಲಿ 'ಅ' ಕಾರಾಂತ ಪದಗಳು ಕಂಡುಬರುವುದು. ತೆಲುಗು ಭಾಷೆಯ ಪ್ರಭಾವದಿಂದ ಎಂದರೆ ತಪ್ಪಾಗಲಾರದು.

### ಪದಗಳು ಮತ್ತು ಪ್ರಯೋಗಾರ್ಥ

ಜಿಲ್ಲೆಯ ಬಳ್ಳಾರಿ ತಾಲ್ಲೂಕು ಹಾಗೂ ಶಿರುಗುಪ್ಪ ತಾಲ್ಲೂಕು ಪೂರ್ಣವಾಗಿ ತೆಲುಗು ಪ್ರಭಾವಕ್ಕೆ ಒಳಪಟ್ಟಿದೆ. ಆಂಧ್ರಪ್ರದೇಶದ ಜನರೊಡನೆ ಬಹುಕಾಲದಿಂದ ಸಂಪರ್ಕದಲ್ಲಿದ್ದುದರಿಂದ ಈ ಪ್ರದೇಶದಲ್ಲಿ ಸಾಕಷ್ಟು ತೆಲುಗರು ನೆಲೆಸಿದ್ದಾರೆ. ಈ ಹಿನ್ನೆಲೆಯಲ್ಲಿ ಒಕರೂಪಾಯಿ, ಡಬ್ಬು, ವಾಮು, ಪೊಗರು, ಎಮ್ಮೆ, ಕಟ್ಟುವಾಳ್ಳು, ಸೇದ್ಯಂ, ಪಾಟಿಡಿ. ಬುರುದ, ಎಂದುಕು, ಕಮ್ಮಗ, ಕುನ್ನೆಮ್ಮನಂಗ, ಇದ್ದಿಲನ್ನು ಬಗ್ಗು ಎಂದು ಉಚ್ಚರಿಸುತ್ತಾರೆ. ಹೀಗೆ ಬಹು ಸಂಖ್ಯೆಯ ಪದಗಳು ಬಳ್ಳಾರಿ ವ್ಯವಹಾರ ಕನ್ನಡದಲ್ಲಿ ಉಚ್ಚಾರಣೆಯಲ್ಲಿವೆ.

ಬಳ್ಳಾರಿ ಕನ್ನಡ ಒಂದು ವಿಶಿಷ್ಟ ಪ್ರಾದೇಶಿಕ ಉಪಭಾಷೆಯೆಂದು ನಿರ್ಧರಿಸಲು ಕೆಲವು ಹೊಸ ಪದಗಳು ಬಳ್ಳಾರಿಯ ವ್ಯವಹಾರದಲ್ಲಿ ಉಚ್ಚಾರಣೆಯಲ್ಲಿವೆ. ಓಸು, ಯೇಸೊಂದು, ಯೇಸು, ವಂಟುಂಟ್ಲೆ, ಉಂಬಾನ, ತಿಂಬಾನಾ, ಜಗ್ಗಿ, ಆಗದಿದ್ರೆಗಿನ, ಅವ್ಟ್ರಿನ, ಇವ್ಟ್ರಿನ, ಜಿಗಿದು, ಜರ, ಸದ್ಯೇವು ಕೆಲ್ಸ, ಗಡಗಡ, ಗಣ್‌ಮಕ್ಳು, ಯೆಣ್‌ಮಕ್ಳು, ರೊಕ್ಕ, ಕುಂದ್ರು, ನಿಂದ್ರು, ಉಳ್ಳಾಗಡ್ಡಿ, ನಿಂತಗಂಬಂತಾನ, ಯದ್ಯ ಮುಂತಾದ ಪ್ರಾದೇಶಿಕ ಉಪಭಾಷೆ ನಿರ್ಣಯಿಸುವ ಪದಗಳಾಗಿ ಉಚ್ಚಾರಣೆಯಲ್ಲಿರುವುದು ಗಮನಿಸುವಂತಹ ಅಂಶ.

ಮೇಲಿನ ಎರಡು ಹಂತಗಳಲ್ಲಿ ಬಳ್ಳಾರಿ ವ್ಯವಹಾರಿಕ ಉಚ್ಚಾರಣೆಯಲ್ಲಿ ಪದಗಳು ಮತ್ತು ಅವುಗಳ ಪ್ರಯೋಗಾರ್ಥಕ ಹಿನ್ನೆಲೆಯಿಂದ ವಿಶ್ಲೇಷಣೆ ಮಾಡಲಾಗಿದೆ.

#### ಅಯ್‌ದಾನ

ಶಿಷ್ಟ ಕನ್ನಡದಲ್ಲಿ ಇದ್ದಾನೆ ಎನ್ನುವುದಕ್ಕೆ ಬಳ್ಳಾರಿ ವ್ಯವಹಾರಿಕ ಕನ್ನಡದಲ್ಲಿ 'ಅಯ್‌ದಾನ' ಎಂದು ಉಚ್ಚಾರಣೆಯಲ್ಲಿದೆ. ಇಲ್ಲಿ 'ಇ' ಕಾರದ ಸ್ಥಾನದಲ್ಲಿ 'ಎ' ಕಾರವು ಬಂದು ಪದ ಮಧ್ಯೆ ಪರಿಸರದ ದ್ವಿತ್ವ ಲೋಪವಾಗಿದೆ. ಇಲ್ಲಿ 'ಅಯ್‌ದಾನ' ಎನ್ನುವ ಪದ ಬಳ್ಳಾರಿ ಕನ್ನಡದಲ್ಲಿ ವಿಶಿಷ್ಟತೆ ಪಡೆದಿದೆ.

#### ಅವುಟ್ರಾನ

'ಅವುಟ್ರಾನ' ಪದ ನಾಮ ಪದದಲ್ಲಿ ಮಾತ್ರ ಬಳಕೆಯಲ್ಲಿದೆ. ಶಿಷ್ಟ ಕನ್ನಡದಲ್ಲಿ ಈ ಪದ 'ಅವು'ಗಳನ್ನು ಎನ್ನುವ ಅರ್ಥದಲ್ಲಿ ಬಳಕೆಯಾಗಿದೆ. 'ಅವು' ಎನ್ನುವ ಪದ ಸಾಮಾನ್ಯವಾಗಿ ಶಿಷ್ಟ ಹಾಗೂ ಬಳ್ಳಾರಿ ಕನ್ನಡದಲ್ಲಿ ಬಳಕೆಯಲ್ಲಿದೆ. ಆದರೆ ಬಹುವಚನ ಪ್ರತ್ಯಯಗಳು ಬದಲಾಗಿ ಬಳ್ಳಾರಿ ವ್ಯವಹಾರಿಕ ಕನ್ನಡದಲ್ಲಿ 'ಟ್ರಿನ್' ಎನ್ನುವ ವಿಶಿಷ್ಟ ರೂಪ ಬಳಕೆಯಲ್ಲಿರುವುದು ಇಲ್ಲಿಯ ವಿಶೇಷ.

ಉದಾಹರಣೆಗೆ: 'ಅವುಟ್ರ್ನ ಕರ್ಕಂಡು ಬಂದು ಇಲ್ಲಿ ಕಟ್ಯಾಕು'

#### ಅತಡುವು

ಶಿಷ್ಟ ಕನ್ನಡದಲ್ಲಿ 'ಆ ಸಲ' ಎನ್ನುವ ಪದಕ್ಕೆ ಬಳ್ಳಾರಿ ವ್ಯವಹಾರಿಕ ಕನ್ನಡದಲ್ಲಿ 'ಆತಡುವು' ಎಂದು ಉಚ್ಚಾರಣೆಗೊಳ್ಳುತ್ತಿದೆ. ಆದರೆ ಬರೆ 'ತಡ' ಎನ್ನುವ ಪದವು ಬೇರೆ ಅರ್ಥವನ್ನು ಸೂಚಿಸುತ್ತದೆ. 'ತಡ' ಎಂದರೆ 'ವಿಳಂಬ' ಎಂದು ಅರ್ಥ. 'ತಡ' ಮತ್ತು 'ತಡವು' ಭಿನ್ನವಾಗಿ ಬಳಕೆಯಾಗಿರುವುದು ಬಳ್ಳಾರಿ ವ್ಯವಹಾರಿಕ ಕನ್ನಡದ ವೈಶಿಷ್ಟ್ಯ

ಉದಾಹರಣೆಗೆ: 'ಒಂದು ಆತಡುವು ನಿಮ್ಮೂರಿಗೆ ಬರಾಕ ಆಗಲಿಲ್ಲ'.

ಒಗುಲು

ಶಿಷ್ಟ ಕನ್ನಡದಲ್ಲಿ ವೈಯಾರ ಎಂದು ಅರ್ಥ ನೀಡುವ ಈ ಪದ ಬಳ್ಳಾರಿ ವ್ಯವಹಾರಿಕ ಕನ್ನಡದಲ್ಲಿ ಬಳಕೆಯಲ್ಲಿದೆ. ಬಹುಶಃ ತೆಲುಗಿನಿಂದ ಸ್ವೀಕರಿಸಿದ ಅಥವಾ ತೆಲುಗು ಪದವನ್ನು ಕನ್ನಡದಲ್ಲೂ ಅದೇ ಅರ್ಥದಲ್ಲಿ ಬಳಸುವ ಪದವಾಗಿದೆ.

ಉದಾಹರಣೆಗೆ: 'ಆ ಹುಡುಗಿ ಏನು ಒಗುಲು ಮಾಡ್ತಾಳಪ್ಪೋ'

**ಕಮ್ಮಗ**

ಇದು ಶಿಷ್ಟ ಕನ್ನಡದಲ್ಲಿ 'ಚೆನ್ನಾಗಿರು' ಎಂದಾದರೂ ತೆಲುಗಿನ ಪ್ರಭಾವದಿಂದ ಇದು ಬಳ್ಳಾರಿಯ ವ್ಯವಹಾರಿಕ ಕನ್ನಡದಲ್ಲಿ ಬಳಕೆಯಲ್ಲಿದೆ.

**ಕುನೆಮ್ಮನಂಗ**

ಇದು ಶಿಷ್ಟ ಭಾಷೆಯಲ್ಲಿ 'ಮುದ್ದಾಗಿ' ಎನ್ನುವುದಕ್ಕೆ ಬಳ್ಳಾರಿ ವ್ಯವಹಾರ ಕನ್ನಡದಲ್ಲಿ 'ಕುನೆಮ್ಮನಂಗ' ಎಂದು ಬಳಕೆಯಾಗುತ್ತಿದೆ.

ಉದಾಹರಣೆಗೆ: 'ಆ ಕೂಸು ಕುನೆಮ್ಮನಂಗ ಅಯ್ಯತೆ ನೋಡು'

**ಕೋರ್**

ಶಿಷ್ಟ ಕನ್ನಡದಲ್ಲಿ ಗುತ್ತಿಗೆ ಎನ್ನುವ ಪದ ಬಳ್ಳಾರಿ ವ್ಯವಹಾರಿಕ ಕನ್ನಡದಲ್ಲಿ ಕೋರ್ ಎಂದು ಬಳಕೆಯಾಗಿದೆ.

ಉದಾಹರಣೆಗೆ ೧. 'ಈ ಸಲ ನೀನು ನೆಲ್ಲಚ್ಚೋ ವಲಕ್ಕೆ ಎಷ್ಟು ಕೋರ್ ಕೊಡ್ತೀಯಾ'

೨. 'ನಂದು ಸ್ವಂತ ವಲ ಇಲ್ಲಪಾ, ಕೋರಿಗ್ಯೆ ಮಾಡಿಕಂತೀನಿ'

ಹೀಗೆ ಅವರೆ ಗಿಡವನ್ನು 'ತಂಗಡಿ' ಗಿಡ ಎಂದು, 'ಬೈತಲೆ' ಎಂಬುದು 'ಪಾಪಿಡಿ' ಎಂಬ ಪದಗಳು ತೆಲುಗಿನ ಪ್ರೇರಣೆಯಿಂದ ಬಂದವುಗಳಾಗಿವೆ. ಹಾಗೆಯೇ ಈ ಭಾಗದ ವ್ಯವಹಾರಿಕ ತೆಲುಗಿನಲ್ಲಿ 'ಬಾಳೆ ಹಣ್ಣಿಗೆ', ಬಾಳೆ ಪಂಡ್ಲು, (ತೆಲುಗು - ಅರಟಿ ಪಂಡ್ಲು), ಗೊತ್ಲೇದು, ಗೊತ್ತಿಲ್ಲ, (ತೆಲುಗು -ತೆಲಿಯದು), ವಲ್ಲಂಟಾಡು, ಒಲ್ಲೆ ಎನ್ನುತ್ತಾನೆ ಎನ್ನುವುದು ಕನ್ನಡದ ಅರ್ಥ, (ತೆಲುಗು - ವದ್ದಂಟಾಡು), ಒಕ ರೂಪಾಯಿಗೆ ಒಂದು ರೂಪಾಯಿ ಎಂದು ಅರ್ಥವಿದೆ. ಆದರೆ ತೆಲುಗಿನಲ್ಲಿ ಕೇವಲ ರೂಪಾಯಿ ಎಂದು ಮಾತ್ರ ಹೇಳುವುದು ರೂಢಿ. ಉದಾಹರಣೆಗೆ ಕನ್ನಡದಲ್ಲಿಯಂತೆ ಒಂದು ಸಾವಿರ ಎನ್ನುವುದಿಲ್ಲ, ವೈಯ್ಯಿರೂಪಾಯ್ಲು ಎಂದಷ್ಟೇ ಹೇಳಲಾಗುತ್ತದೆ. ಆದರೆ ಬಳ್ಳಾರಿಯ ವ್ಯವಹಾರಿಕ ತೆಲುಗಿನಲ್ಲಿ ಒಕ್ಕ ವೈಯ್ಯಿ ಎಂದು ಹೇಳಲಾಗುತ್ತದೆ.

# ಅಧ್ಯಾಯ ಮೂರು
# ಕನ್ನಡದ ಸಾಹಿತ್ಯಿಕ ಸಂದರ್ಭದಲ್ಲಿ ಪ್ರಾದೇಶಿಕತೆಯ ಸ್ವರೂಪ

೩.೧ ಪ್ರಾದೇಶಿಕತೆಯ ನಿರ್ವಚನೆ

ಪ್ರಾದೇಶಿಕತೆಯನ್ನು ನಿರ್ಧರಿಸಲು ಮುಖ್ಯವಾಗಿ ಸಾಹಿತ್ಯ ರಚನೆಗೊಂಡ ಲೇಖಕನ ಭೌಗೋಳಿಕತೆ, ಭಾಷಿಕತೆ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗಳನ್ನು ಗಮನಿಸಬಹುದಾಗಿದೆ. ಕನ್ನಡದ ಕಥನ ಕಲೆಯು ಆರಂಭಗೊಂಡುದೇ ಇಂತಹುದೊಂದು ವಿಶಿಷ್ಟವಾದ ಅಂಶದಿಂದಲೇ ಎಂದು ವಿಮರ್ಶಕರು ಗುರುತಿಸಿದ್ದಾರೆ. ಕನ್ನಡದ ಪ್ರಥಮ ಕಾಂದಬರಿಯು ಇಂದಿರಾಬಾಯಿ ಸೃಷ್ಟಿಗೊಂಡ ಕ್ರಮ ಕೂಡಾ ಪ್ರಾದೇಶಿಕತೆಯ ನೆಲೆಯಲ್ಲಿಯೇ ಆಗಿರುವುದೊಂದು ವಿಶೇಷ. ಕನ್ನಡದಲ್ಲಿ ರೂಪು ತಳೆದ ಕಾದಂಬರಿ ಪ್ರಕಾರಕ್ಕಾಗಲಿ, ಸಣ್ಣಕಥೆಯ ಪ್ರಕಾರಕ್ಕಾಗಲಿ ಪಾಶ್ಚಾತ್ಯ ಸಾಹಿತ್ಯಿಕ ರೂಪಗಳೇ ಕಾರಣವಾದರೂ ಕಾಲ ಮತ್ತು ಸಾಮಾಜಿಕ ಸಂದರ್ಭದ ದೃಷ್ಟಿಯಿಂದ ಇವು ಸ್ವಲ್ಪವಾದರೂ ಆ ಪ್ರಕಾರಗಳಿಗೆ ಭಿನ್ನವಾಗಿವೆ. ಏಕೆಂದರೆ ವಸಾಹತು ಸಂದರ್ಭದಲ್ಲಿ ಪಾಶ್ಚಾತ್ಯ ಸಂಸ್ಕೃತಿಯನ್ನು ವಿರೋದಿಸುವ ಮತ್ತು ದೇಶೀ ನೆಲೆಗಳಿಗಾಗಿ ಹುಡುಕಾಟ ನಡೆಸುವ ಜರೂರತ್ತು ಬಹುತೇಕ ಎಲ್ಲಾ ದೇಶೀಯ ಲೇಖಕರಿಗಿತ್ತು. ''ಪಾಶ್ಚಾತ್ಯ ನಾವೆಲ್‌ನ ಮೀಮಾಂಸೆಯ ತಾತ್ವಿಕ ತಿಳುವಳಿಕೆಯಿಂದ ಹೊರಟು ಕನ್ನಡದಲ್ಲಿ ಈ ಪ್ರಕಾರವು ತಳೆಯುವ ರೂಪವನ್ನು ವಿವರಿಸಲು ಯತ್ನಿಸಲಾಗಿದೆ. ಹೀಗೆ ಹೇಳಿದರೆ ಕನ್ನಡ ಕಾದಂಬರಿಯು ನಾವೆಲ್‌ನ ನಕಲು ಎಂದು ಅರ್ಥವಲ್ಲ. ಸಾಂಸ್ಕೃತಿಕ ರೂಪಗಳ ಬೇರು ತಳೆಯುವಿಕೆ ಮತ್ತು ಎರಡು ಭಾಷೆಗಳ ನಡುವಣ ಸಾಂಸ್ಕೃತಿಕ ಕೊಡು-ಪಡೆಯುವಿಕೆಗಳು ಸರಳವಾದ ಪ್ರಕ್ರಿಯೆಯಲ್ಲ. ವಸಾಹತುಶಾಹಿಯ ಕಾಲದಲ್ಲಿ ಕರ್ನಾಟಕದ ಸಾಂಸ್ಕೃತಿಕ ಅವಸ್ಥಾಂತರಗಳ ಚಾರಿತ್ರಿಕ ಸಂದರ್ಭದ ಒಡಲಿನಿಂದ ತಲೆಯೆತ್ತಿದ ಕಾದಂಬರಿಯ ಮೂಲದ್ರವ್ಯ ಇಲ್ಲಿನದೇ ಅದನ್ನು ಕಟ್ಟಲು ಒದಗುವ ಭಾಷೆ, ಉಪಮೆ, ರೂಪಕ, ಶೈಲಿ, ಜೀವನಕತೆಯೂ ಈ ಸಂಸ್ಕೃತಿಯದು. ಇನ್ನೂ ಖಚಿತವಾಗಿ ಹೇಳಬೇಕಾದರೆ ಕಾದಂಬರಿ ಬರವಣಿಗೆಯ ಮೂಲಕ ಆಧುನಿಕ ಸಂಸ್ಕೃತಿಯ ನಿರೂಪಣೆ ನಡೆಯಿತು. ಈ ವ್ಯತ್ಯಾಸದ ತಿಳಿವು ನಮ್ಮ ಅಧ್ಯಯನಕ್ಕೆ ಮುಖ್ಯ. ಕಾದಂಬರಿಗೆ ನಾವೆಲ್‌ನೊಂದಿಗೆ ಸಂಬಂಧವಿದೆ. ಆದರೆ ನಾವೆಲ್ ನೆಂಟನಾಗಿಯೂ ಕಾದಂಬರಿ ಭಿನ್ನ ರಚನೆ. ಕಾದಂಬರಿಯನ್ನು ಸಾಧ್ಯ ಮಾಡಿದ ಸಾಮಾಜಿಕ ಸನ್ನಿವೇಶದಲ್ಲಿಯೇ ಅದನ್ನು ವಿವರಿಸಿಕೊಳ್ಳಬೇಕು.''[೨] ಎನ್ನುವ ಅಭಿಪ್ರಾಯವೂ ಇದೆ. ಹಾಗೆ ನೋಡಿದರೆ ಇಲ್ಲಿನ ವಾದದ ಪ್ರಕಾರ ಕನ್ನಡದಲ್ಲಿ ರೂಪುಗೊಂಡ ಕಥನವೆಲ್ಲಾ ಪಾಶ್ಚಾತ್ಯ ಕಥನ ಕ್ರಮಕ್ಕಿಂತ ಭಿನ್ನವಾದುದೆಂದು ಹೇಳಬೇಕಾಗುತ್ತದೆ. ಇದು ಎಷ್ಟರ ಮಟ್ಟಿಗೆ ಸರಿಯೋ ತಪ್ಪೋ, ಆದರೆ ಇದರಿಂದ ಒಂದಂಶವಂತೂ ಸ್ಪಷ್ಟವಾಗುತ್ತದೆ. ಕಥನವು ಹುಟ್ಟುವ ಸಾಮಾಜಿಕ ಸನ್ನಿವೇಶದಲ್ಲಿ ಆ ಕಥನವನ್ನು ವಿವರಿಸಿಕೊಳ್ಳಬೇಕು ಎಂದಾದರೆ ಪ್ರಾದೇಶಿಕತೆಯ ಸೊಗಡಿನಲ್ಲಿ ಅರಳಿದ ಎಲ್ಲ ಕಥನಗಳಿಗೂ ಅದರದ್ದೇ ಆದ ಸಾವಯವ ಬಂಧವೊಂದು ಇರುತ್ತದೆ ಎಂಬುದು.

ಪಾರಂಪರಿಕ ಮೌಲ್ಯಗಳಲ್ಲಿನ ಒಳಿತನ್ನು ಪ್ರತಿಪಾದಿಸುವ ಹಾಗೆಯೇ ಇಂಗ್ಲಿಷ್ ಶಿಕ್ಷಣದ ಮೂಲಕ ಪಡೆದ ಸಂಸ್ಕಾರದೊಂದಿಗೆ ಪ್ರಗತಿಶೀಲತೆಯನ್ನು ಪ್ರತಿಪಾದಿಸುವ ತುರ್ತು ಆರಂಭಧ ಲೇಖಕರಿಗೆ ಇದ್ದಂತಿದೆ. ಹಾಗಾಗಿಯೇ ಗುಲ್ವಾಡಿ ವೆಂಕಟರಾಯರ ಇಂದಿರಾ ಬಾಯಿ ಕಾದಂಬರಿಯು ಭಾರತೀಯ ಸಂಸ್ಕೃತಿಯ ದಟ್ಟವಿವರಗಳನ್ನು ಹೇಳುತ್ತಲೇ ಆಧುನಿಕತೆಯ ಒಳಿತಿನ ''ಪ್ರಾದೇಶಿಕತೆಯೆನ್ನುವುದು ಒಂದು ಪ್ರದೇಶದ ಭೌಗೋಳಿಕ ಹಿನ್ನೆಲೆ, ಭಾಷಿಕತೆ, ಸಮಾಜದ ಆಚರಣೆಗಳು, ಸಾಂಸ್ಕೃತಿಕ ಅಂಶಗಳು ಮುಖ್ಯವಾಗಿ ಕಂಡು ಬರುತ್ತವೆ. ಈ ಪ್ರಾದೇಶಿಕ

ಅಂಶಗಳು ತನ್ನ ಪರಿಸರ ಪ್ರಪಂಚವನ್ನು ಮತ್ತೊಂದು ಪರಿಸರ ಪ್ರಪಂಚದಿಂದ ಪ್ರತ್ಯೇಕಗೊಳಿಸುತ್ತದೆ, ಆದರೆ ಮಾನವೀಯ ಮೌಲ್ಯಗಳು ಎಲ್ಲೆಡೆ ಕೆಲಸ ಮಾಡುತ್ತಿರುತ್ತವೆ.''[೨] ಎಂದು ಹೇಳಲಾಗುತ್ತದೆ.

ಆಧುನಿಕ ಕನ್ನಡದ ಕಥನ ಕಲೆಗೆ ಮುಖ್ಯ ಪ್ರೇರಣೆ ಪಾಶ್ಚಾತ್ಯ ಸಾಹಿತ್ಯವೇ ಆದರೂ ರಾಷ್ಟ್ರೀಯತೆಯ ಕುರಿತಾದ ಇದ್ದ ಆಗಿನ ಪರಿಕಲ್ಪನೆ ಮತ್ತು ದೇಶ, ಭಾಷೆ, ಪ್ರಾಂತ್ಯದ ಬಗೆಗೆ ಇರುವ ಸಾವಯವ ಸಂಬಂಧ ಇವೆಲ್ಲವುಗಳಿಂದಾಗಿ ಪಾಶ್ಚಾತ್ಯ ಜಗತ್ತಿನ ಜೀವನ ವಿಧಾನ ಸಾಹಿತ್ಯದ ಕುರಿತಾದ ನಂಬಿಕೆಗಳು, ಸಾಹಿತ್ಯಕ ರೂಪಗಳ ಪ್ರಭಾವ ಇವು ಕನ್ನಡದ ಕಥನ ಸ್ವರೂಪವನ್ನು ನಿರ್ಧರಿಸುವ ಪ್ರಮುಖ ಅಂಶಗಳಾದವು. ಕಥನ ಕಲೆಯ ಮುಖ್ಯ ಮಾಧ್ಯಮವಾದ ಕಾದಂಬರಿಯ ಸ್ವರೂಪವನ್ನು ಈ ರೀತಿಯಾಗಿ ಗುರುತಿಸಬಹುದು. ''ನಾವೆಲ್ ಎನ್ನುವುದು ಜನಪದ ಸಾಹಸ ಕತೆಗಳ ಒಂದು ಪ್ರಬೇಧ ಕೂಡ ಹೌದು. ಅರೇಬಿಯನ್ ನೈಟ್ಸ್, ಸಿಂದಾಬಾದನ ಸಾಹಸಯಾತ್ರೆ ಮೊದಲಾದ ಕಥನಗಳು ಈ ಪ್ರಕಾರದಲ್ಲಿ ಬರುತ್ತವೆ. ಇವುಗಳ ವೈಶಿಷ್ಟ್ಯವೆಂದರೆ ಪಾತ್ರಗಳ ಕ್ರಿಯೆಯ ವಾಸ್ತವ ಪ್ರಪಂಚದಲ್ಲಿ ನಿರ್ದಿಷ್ಟ ಕಾಲ ಮತ್ತು ನಿರ್ದಿಷ್ಟ ಸ್ಥಳಗಳಲ್ಲಿ ನಡೆಯುವುದು. ಈ ಕಾಲ ಹಳೆಯ ಕತೆಗಳ ಕಾಲವಲ್ಲ. ತನ್ನ ಘಟನಾ ನಿರ್ದಿಷ್ಟತೆಯಿಂದಾಗಿ ಇದು ಕಾದಂಬರಿಯ ನಾವೆಲ್‌ನ ಲಕ್ಷಣವೂ ಹೌದು ಸಾಂಪ್ರದಾಯಿಕ ಕಥನಗಳಿಂದ ಭಿನ್ನವಾಗುವ ನಾವೆಲ್ಲಾ ಹೊಸದು. ಆದರೆ ನಾವೆಲ್ ನಾವೆಲ್ಲಾಗಿಂತ ಬೇರೆಯಾದ ರಚನೆ. ಸಂಕೀರ್ಣವಾದ ಕಥಾಸಂವಿಧಾನವನ್ನೂ ವಾಸ್ತವಿಕ ಜೀವನವನ್ನೂ ಪ್ರತಿನಿಧಿಸುವ ಪಾತ್ರ ಮತ್ತು ಘಟನೆಗಳನ್ನು ಅದು ಹೊಂದಿರಬೇಕು. ಆದುದರಿಂದ ತನ್ನ ಲಕ್ಷಣದಲ್ಲಿ ನಾವೆಲ್ ಪಾತ್ರ ಚಿತ್ರಣ, ಕಥಾ ಸಂವಿಧಾನಗಳನ್ನು ಹೊಂದಿದ, ವಾಸ್ತವಿಕ ನಿರೂಪಣೆಯುಳ್ಳ ಕಾಲ್ಪನಿಕ ರಚನೆ. ಭೂತ ಯಾ ವರ್ತಮಾನ ಕಾಲದ ಚಿತ್ರಣವಿರುವ ಸುದೀರ್ಘ ಕಥನ.''[೩]

ಮೂಲಭೂತವಾಗಿ ಕಾದಂಬರಿಯೊಂದರ ಕೇಂದ್ರ ಅದರ ಕಥನವಾಗಿದೆ. ಅದರ ಕಥಾ ಸಂವಿಧಾನವನ್ನು ಓ. ಎಲ್. ನಾಗಭೂಷಣಸ್ವಾಮಿಯವರು ಹೀಗೆ ವಿವರಿಸುತ್ತಾರೆ, ಸಂವಿಧಾನದ ಯಾವುದೇ ವಿವರಣೆ ಪಾತ್ರ ಮತ್ತು ಕ್ರಿಯೆಯ ಪರಿಕಲ್ಪನೆಯೊಂದಿಗೆ ಬೆರೆತುಕೊಂಡೇ ಇರುವುದು ಅನಿವಾರ್ಯ. ಹಾಗಾಗಿ ಸಂವಿಧಾನವನ್ನು ತೀರ ಅಮೂರ್ತವಾಗಿಯೋ ಅಥವಾ ಕೃತಿಯ ಸಾರಾಂಶ ಎಂದೋ ವಿವರಿಸಲು ಸಾಧ್ಯ. ತೀರ ಸರಳವಾಗಿ ಹೇಳುವುದಾದರೆ, ನಿರ್ದಿಷ್ಟ ಭಾವನಾತ್ಮಕ ಕಲಾತ್ಮಕ ಪರಿಣಾಮಗಳನ್ನು ಸಾಧಿಸಲು ಕ್ರಿಯೆಗಳನ್ನು ಒಂದು ನಿರ್ದಿಷ್ಟ ವ್ಯವಸ್ಥೆಗೆ ಸಕಾರಣವಾಗಿ ಒಳಪಡಿಸಿ ರಚಿಸಿಕೊಂಡಿರುವ ಅಭಿವ್ಯಕ್ತಿ ವಿನ್ಯಾಸ ಕಥಾ ಸಂವಿಧಾನ''[೪]ವಾಗಿದೆ.

ಸಾಂಪ್ರದಾಯಿಕ ಕಥನಗಳು ವಾಸ್ತವಿಕ ಸತ್ಯತಾತ್ವಿಕತೆಗಳನ್ನು ಚಂಚಲ ಬದುಕಿನಲ್ಲಿ ಸ್ಥಿರ ವಾಗಿರುವ ಸಂಗತಿಗಳೆಂದು ಭಾವಿಸುತ್ತವೆ. ಈ ಕಥನ ಲೇಖಕರ ಪಾಲಿಗೆ ಕೆಲವು ಸಾರ್ವಕಾಲಿಕ, ವಿಶ್ವಸ್ಥ ಮೌಲ್ಯಗಳಿವೆ. ಚಂಚಲ ವಾಸ್ತವದಲ್ಲಿ ಇವುಗಳಿಗೆ ಘಾತವೊದಗಿದರೂ ಈ ಮೌಲ್ಯಗಳನ್ನು ಉಳಿಸಬೇಕು ಎನ್ನುವುದು ಸಾಂಪ್ರದಾಯಿಕ ಕಥನಕಾರರ ಧೋರಣೆಯಾಗಿದೆ. ಆದುದರಿಂದ ಸ್ಥಿರ, ಸಾರ್ವಕಾಲಿಕ, ವಿಶ್ವಸ್ಥ ಮೌಲ್ಯಗಳನ್ನು ಪ್ರತಿಪಾದಿಸಲು ವಸ್ತು ಪ್ರಪಂಚದ ಅಶಾಶ್ವತ, ಚಂಚಲ ವಿವರಗಳನ್ನು ಇವರು ಬಳಸಿಕೊಳ್ಳುತ್ತಾರೆ. ನೀತಿಬೋಧೆಗಾಗಿ ವಾಸ್ತವದ ವಿವರಗಳ ಬಳಕೆಯಾಗುತ್ತಿರುವುದರಿಂದ ಕಥೆಯ ಅಂತ್ಯದಲ್ಲಿನ ಮೌಲ್ಯ ವಿಜಯವೇ ಕಥನಗಳ ಪ್ರಧಾನ ಉದ್ದೇಶ. ಆದರೆ ನಾವೆಲ್ ಭಿನ್ನವಾದ ಸೈದ್ಧಾಂತಿಕ ನೆಲೆಯಿಂದ ಹುಟ್ಟುತ್ತದೆ. ನಾವೆಲ್ ಪ್ರಪಂಚದಲ್ಲಿ ನಡೆಯುವ ಘಟನೆಗಳಿಗೆ ಕಾರ್ಯಕಾರಣ ಸಂಬಂಧವಿದೆ. ನಾವೆಲ್, ವಾಸ್ತವದ ಬದುಕಿನ ಮೇಲ್ನೋಟದ ಅಶಾಶ್ವತ, ಅತಾರ್ಕಿಕ ವಿವರಗಳನ್ನು ತಾರ್ಕಿಕವಾದ ವೈಚಾರಿಕ ವಿನ್ಯಾಸದಲ್ಲಿ ಹಿಡಿದಿಡುತ್ತದೆ. ಅಂದರೆ ಚಂಚಲಶೀಲವಾಗಿರುವ, ಕಾರ್ಯಕಾರಣ ಸಂಬಂಧಿತವಾಗಿ ಬೆಳೆಯುವ, ಬದಲಾಗುವ ಪಾತ್ರ, ಘಟನೆಗಳನ್ನು ನಾವು ನಾವೆಲ್‌ನಲ್ಲಿ ಕಾಣುತ್ತೇವೆ. ಈ ಬದಲಾವಣೆ ಜಡ ವಾದುದಲ್ಲ. ಅದು ಸಂಘರ್ಷಕ್ಕೂ ಕಾರಣವಾಗುತ್ತದೆ. ಹೀಗೆ ಸಾಂಪ್ರದಾಯಿಕ ಕಥನವು ಆದರ್ಶವನ್ನು ಸಾಕ್ಷಾತ್ಕರಿಸಲೆಂದೇ ವಿನ್ಯಾಸಗೊಳ್ಳುವ ಸಂಘರ್ಷಹೀನ ರಚನೆಯಾದರೆ, ಆದರ್ಶ ಮತ್ತು ವಾಸ್ತವಗಳ ನಡುವಿನ ಸಂಘರ್ಷವೆನ್ನುವುದು ನಾವೆಲ್‌ನಲ್ಲಿ ಎದ್ದು ತೋರುವ ಅಂಶವಾಗಿದೆ. ಕಥಾ ಸಂವಿಧಾನವು ಈ ಸಂಘರ್ಷವನ್ನು ಒಳಗೊಂಡಿರುತ್ತದೆ.

ಸಾಂಪ್ರದಾಯಿಕ ಗದ್ಯಕಥಾನಕಗಳಲ್ಲಿ ಕುತೂಹಲ ಕೆರಳಿಸುವ ಕಥನ ಕ್ರಮ ಮುಖ್ಯವಾಗುತ್ತದೆ. ಆದರೆ ನಾವೆಲ್ ತನ್ನ ಆಕೃತಿಯಲ್ಲಿಯೇ ತಾನು ಒಳಗೊಂಡಿರುವ ಘಟನೆಗಳ ತರ್ಕವನ್ನೂ ಮಂಡಿಸಲು ಯತ್ನಿಸುತ್ತದೆ. ಸಾಂಪ್ರದಾಯಿಕ ಕಥನಗಳಲ್ಲಿ ಘಟನೆ, ಸನ್ನಿವೇಶ, ಪಾತ್ರ ಚಿತ್ರಣ ಎಲ್ಲವೂ ಪೂರ್ವನಿಶ್ಚಿತ ಸಿದ್ಧ ಮಾದರಿ. ಕೌಶಲ್ಯವಿರುವುದು ನಿರೂಪಣೆಯಲ್ಲಿ ಮಾತ್ರ. ಆದುದರಿಂದ ಒಟ್ಟಿನಲ್ಲಿ ಸಾಂಪ್ರದಾಯಿಕ ಕಥನವು ತಾನು ಹೊಮ್ಮಿಸುವ ಪ್ರಬಂಧ ಧ್ವನಿಗೆ ಸಂಬಂಧಿಸಿದಂತೆ ಮಾತ್ರ ಕ್ರಿಯೆ ಮತ್ತು ಘಟನೆಗಳ ತರ್ಕವನ್ನು ಕಾಪಾಡಿಕೊಳ್ಳುತ್ತದೆ. ಆದರೆ ನಾವೆಲ್‌ನಲ್ಲಿ ಕ್ರಿಯೆ, ಘಟನೆ, ಪಾತ್ರ ಈ ಎಲ್ಲದರ ಬೆಳವಣಿಗೆಗಳಲ್ಲಿಯೂ ನಿಶ್ಚಿತ ತರ್ಕಬದ್ಧತೆ ಇರಬೇಕು. ಅವು ಓದುಗರು ಸಹಜವಾಗಿ ನಂಬುವಂತಿರಬೇಕು. ಯಾವುದೇ ಕ್ರಿಯೆಗಳ ಕಾರಣಗಳೂ ಓದುಗರಿಗೆ ಸ್ಪಷ್ಟವಾಗಿ ಅರಿವಿಗೆ ಬರುವಂತೆ ಇರಬೇಕು. ಫಾಸ್ಟರ್ ಇದನ್ನೇ ವಿಸಬಲ್ ವರ್ಲ್ಡ್ ಎಂದು ಕರೆದುದು. ಈ ಎಲ್ಲವೂ ಸೇರಿ ಕಥಾಸಂವಿಧಾನವಾಗುತ್ತದೆ.

ಕಥಾಸಂವಿಧಾನದಲ್ಲಿ ಲೇಖಕನು ನಾವೆಲ್‌ನ ಕ್ರಿಯೆಗಳನ್ನು ಸಕಾರಣವಾಗಿ ನಿರ್ದಿಷ್ಟ ವ್ಯವಸ್ಥೆಗೆ ಒಳಪಡಿಸುತ್ತಾನೆ ಅಂದಾಗ, ಅವನು 'ಕಾಲ'ವನ್ನೂ ವ್ಯವಸ್ಥೆಗೊಳಿಸುತ್ತಿರುತ್ತಾನೆ ಎಂದೇ ಅರ್ಥ. ಸಾಂಪ್ರದಾಯಿಕ ಗದ್ಯ ಕಥಗಳಿಂದ ಕಾದಂಬರಿಯು ವಿಶಿಷ್ಟವೆನಿಸುವ ಇನ್ನೊಂದು ಪ್ರಮುಖ ಅಂಶ ಈ ವ್ಯವಸ್ಥಿತಗೊಂಡಿರುವ ಕಾಲದ ಆಯಾಮ.

ಸಾಂಪ್ರದಾಯಿಕ ಗದ್ಯದ ಕಾಲದ ಪರಿಕಲ್ಪನೆಯು ಅನಿರ್ದಿಷ್ಟ, ಅಸ್ಪಷ್ಟ ಮತ್ತು ಅನಂತವಾಗಿರುತ್ತದೆ. ಆದರೆ ನಾವೆಲ್‌ನಲ್ಲಿ ಕಾಲ ಮತ್ತು ಅವಕಾಶ ಎರಡೂ ನಿರ್ದಿಷ್ಟತೆಯನ್ನು ಪಡೆದಿರುತ್ತವೆ. ಈ ನಿರ್ದಿಷ್ಟತೆಯು ಪಾತ್ರ, ಘಟನೆ, ಕ್ರಿಯೆಗಳ ನಿರ್ದಿಷ್ಟತೆಯಲ್ಲಿ ವ್ಯಕ್ತವಾಗುತ್ತಿರುತ್ತದೆ.

ಕನ್ನಡದ ಕಥನಕಲೆಯು ಪಾಶ್ಚಿಮಾತ್ಯ ಕಥನಕ್ರಮಗಳಿಂದ ಪ್ರಭಾವಿತವಾಗಿದೆ. ವಸಾಹತುಶಾಹಿ ಆಳ್ವಿಕೆ, ಆಧುನಿಕತೆಯ ಜೊತೆಜೊತೆಗೆ ಬಂದ ಅಂದರೆ - ಆಧುನಿಕತೆ ಯಾವುದು ಪಾಶ್ಚಾತ್ಯ ಸಂಸ್ಕೃತಿ ಯಾವುದು ಎಂದು ವಿಭಜಿಸಲಾಗದಂತಹ ಜೀವನವಿಧಾನವೊಂದರ ಪ್ರಭಾವದಿಂದಲೂ ಇಲ್ಲಿನ ಕಥನ ಕಲೆಯು ತನ್ನ ನೆಲೆಗಳನ್ನು ಕಂಡುಕೊಂಡಿತೆಂದರೆ ತಪ್ಪಾಗಲಾರದು. "ವಸಾಹತು ಆಡಳಿತ ಮತ್ತು ವಸಾಹತು ವಸಾಹತು ಆಧುನಿಕತೆ ಭಾರತೀಯ ಸಮಾಜವನ್ನು ಹೊಸ ರೀತಿಯಲ್ಲಿ ರೂಪಿಸಲಾರಂಭಿಸಿತು. ಸಾಂಪ್ರದಾಯಿಕ ಭಾರತೀಯ ಸಮಾಜದಲ್ಲಿ ಹೊಸ ಚಲನೆಗಳು ಆರಂಭವಾದವು. ರಾಜಕಾರಣ, ಆಡಳಿತ, ಸಂಸ್ಕೃತಿಗಳಲ್ಲಿ ನಡೆದ ರಚನೀಕರಣ ಮತ್ತು ರಚನಾ ನಿರಸನ ಮತ್ತು ಪುನರ್‌ರಚನೀಕರಣ ಪ್ರಕ್ರಿಯೆಯನ್ನು ಹಾಗೂ ನಮ್ಮ ಆಧುನಿಕತೆಯ ಸ್ವರೂಪವನ್ನು ವಿಶ್ಲೇಷಿಸುತ್ತಲೇ ಮೊದಲ ಕಾದಂಬರಿಗಳನ್ನು ನಾವು ವಿವರಿಸಿಕೊಳ್ಳಬೇಕು."[೫] ಎನ್ನುವ ಹೇಳಿಕೆಯಲ್ಲಿಯೂ ಈ ಮಾತು ಸ್ಪಷ್ಟವಾಗುತ್ತದೆ. ಹಾಗೆಯೇ ಮುಂದುವರೆದು ಕರ್ನಾಟಕದ ವಸಾಹತು ಚರಿತ್ರೆ ಟಿಪ್ಪೂ ಪತನಗೊಂಡ ೧೭೯೯ ರಿಂದ ಆರಂಭವಾಗುವುದಾದರೂ ೧೮೫೭ರ ಭಾರತದ ಸ್ವಾತಂತ್ರ್ಯ ಸಂಗ್ರಾಮವನ್ನು ದಮನ ಮಾಡುವ ಹೊತ್ತಿಗೇ ವಸಾಹತು ಆಡಳಿತ ಭಾರತದಲ್ಲಿ ಭದ್ರವಾಗಿ ಕಾಲೂರಿತ್ತು. ಅದೇ ವರ್ಷ ಭಾರತದ ಮೂರು ಪ್ರಮುಖ ಪಟ್ಟಣಗಳಾದ ಕಲಕತ್ತಾ, ಮುಂಬಯಿ ಮತ್ತು ಮದರಾಸುಗಳಲ್ಲಿ ಪಾಶ್ಚಿಮಾತ್ಯ ಕ್ರಮದ ಶಿಕ್ಷಣವನ್ನು ನೀಡುವ ವಿಶ್ವವಿದ್ಯಾಲಯಗಳ ಸ್ಥಾಪನೆಯಾದುದು ಗಮನಾರ್ಹ. ಈ ಶಿಕ್ಷಣ ಕ್ರಮದ ಹಿಂದಿದ್ದ ಉದ್ದೇಶ, ಅದರ ಪರಿಣಾಮ, ಕುಪ್ರಸಿದ್ಧವಾದ ಮೆಕಾಲೆಯ ಮಿನಿಟ್ಸ್ ಮೊದಲಾದವುಗಳು ಈಗಾಗಲೇ ಎಲ್ಲರಿಗೂ ತಿಳಿದಿರುವ ಸಂಗತಿ. ವಸಾಹತು ಶಾಹಿಯು ಭಾರತದಲ್ಲಿ ಸಾಮಾಜಿಕ ಕ್ರಾಂತಿಯನ್ನೇನೂ ತರಲಿಲ್ಲ. ಬದಲಾಗಿ ಕೆಲವು ಪರಿವರ್ತನೆಗಳನ್ನು ಮತ್ತು ವಕ್ರ ಬದಲಾವಣೆಗಳನ್ನು ತಂದಿತು. ಹಳೆಯ ಫ್ಯೂಡಲ್ ವ್ಯವಸ್ಥೆಯನ್ನು ಎದುರಿಸಿ, ಛಿದ್ರಮಾಡಿ ಹುಟ್ಟಿದ ಆಧುನಿಕತೆಯಲ್ಲ ಅದು. ಭಾರತದ ಶ್ರೇಣೀಕರಣಗಳನ್ನು ಮುಂದುವರಿಸಿದ ಮತ್ತು ಪರಿವರ್ತಿಸಿದ ಆಧುನಿಕತೆಯದು. ಭಾರತೀಯ ಇಂಗ್ಲಿಷ್ ವಿದ್ಯಾವಂತ ಮನಸ್ಸು ರೂಪುಗೊಂಡದ್ದು ಈ ಅವಸ್ಥಾಂತರಗಳಲ್ಲಿ.

### ೩.೨. ಆಧುನಿಕ ಕನ್ನಡ ಕಥನದ ಸ್ವರೂಪ

ಕರ್ನಾಟಕದ ವಸಾಹತುಶಾಹಿ ಚರಿತ್ರೆಯನ್ನು ಗುರುತಿಸುವುದು ಟಿಪ್ಪುವಿನ ಪತನಾನಂತರದ ಕಾಲಘಟ್ಟದಿಂದಾಗಿದೆ. ೧೮೫೭ ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಸಮಯಕ್ಕೆ ದೇಶಾದ್ಯಂತ ಬ್ರಿಟಿಷ್ ಸಾಮ್ರಾಜ್ಯಶಾಹಿ ಆಡಳಿತ ದೇಶವನ್ನು ತನ್ನ ತೆಕ್ಕೆಗೆ ತೆಗೆದುಕೊಂಡಿತ್ತು. "ವಸಾಹತುಶಾಹಿಯು ಭಾರತದಲ್ಲಿ ಸಾಮಾಜಿಕ ಕ್ರಾಂತಿಯನ್ನೇನೂ ತರಲಿಲ್ಲ. ಬದಲಾಗಿ ಕೆಲವು ಪರಿವರ್ತನೆಗಳನ್ನು ಮತ್ತು ವಕ್ರ ಬದಲಾವಣೆಗಳನ್ನು ತಂದಿತು. ಹಳೇಯ ಫ್ಯೂಡಲ್ ವ್ಯವಸ್ಥೆಯನ್ನು ಎದುರಿಸಿ, ಛಿದ್ರಮಾಡಿ ಹುಟ್ಟಿದ ಆಧುನಿಕತೆಯಲ್ಲ ಅದು. ಭಾರತದ ಶ್ರೇಣೀಕರಣಗಳನ್ನು ಮುಂದುವರಿಸಿದ ಮತ್ತು ಪರಿವರ್ತಿಸಿದ ಆಧುನಿಕತೆಯದು. ಭಾರತೀಯ ಇಂಗ್ಲಿಷ್ ವಿದ್ಯಾವಂತ ಮನಸ್ಸು ರೂಪುಗೊಂಡದ್ದು ಈ ಅವಸ್ಥಾಂತರಗಳಲ್ಲಿ"[೧] ಎಂದು ಹೇಳಲಾಗುತ್ತದೆ.

ಪ್ರಾದೇಶಿಕ ಸತ್ವವುಳ್ಳ ಕನ್ನಡದ ಪ್ರಥಮ ಸಾಮಾಜಿಕ ಕಾದಂಬರಿ ಎಂಬ ಹೆಗ್ಗಳಿಕೆಗೆ ಪಾತ್ರವಾದ ಗುಲ್ವಾಡಿ ವೆಂಕಟರಾಯರ 'ಇಂದಿರಾಬಾಯಿ' ಕಾದಂಬರಿಯ ಕಥಾನಕದ ಸ್ವರೂಪವನ್ನು ಇಲ್ಲಿ ಗಮನಿಸಬಹುದಾಗಿದೆ. ೧೮೯೯ ರಲ್ಲಿ ಪ್ರಕಟಗೊಂಡ 'ಇಂದಿರಾಬಾಯಿ' ಕಾದಂಬರಿಯು ಸಾಮಾಜಿಕ ಅನಿಷ್ಟಗಳನ್ನು ವಿರೋಧಿಸುವ ಕಥಾಸಂವಿಧಾನವನ್ನು ಹೊಂದಿದ ಕೃತಿಯಾಗಿದೆ. ಕಾದಂಬರಿಯ ಶೈಲಿಯು ಪ್ರಾದೇಶಿಕ ಬಾಷೆಯ ಸೊಗಡನ್ನು ಒಳಗೊಂಡು ಹಗುರವಾದ ಹಾಸ್ಯದಿಂದ ನಿರೂಪಿಸಲ್ಪಟ್ಟ ಕಥಾನಕವಾಗಿದೆ.

"ವಸಾಹತೀಕರಣದ ಸಂದರ್ಭದಲ್ಲಿ ಪರಕೀಯ ಯಜಮಾನ ಸಂಸ್ಕೃತಿ ಮತ್ತು ದೇಸೀ ಸಂಸ್ಕೃತಿಗಳ ಸಂಘರ್ಷದಲ್ಲಿ ಹುಟ್ಟಿಕೊಂಡ ಇಂದಿರಾಬಾಯಿ ಯಜಮಾನ ಸಂಸ್ಕೃತಿ ನೆಲದ ಸಂಸ್ಕೃತಿಯನ್ನು ತೊತ್ತಳ ತುಳಿದು ನಿಂತಾಗ ಮತ್ತೆ ಪ್ರತಿಭಟನೆಯ ರೂಪದಲ್ಲಿ ದೇಶೀಯ ಸಂಸ್ಕೃತಿ ಮತ್ತೆ ನೆಲೆಯಾಗಲು ಪ್ರಯತ್ನಿಸುತ್ತದೆ. ಹೀಗಾಗಿ ಇಂದಿರಾಬಾಯಿಯಲ್ಲಿ ವೆಂಕಟರಾಯರು ದೇಸೀಯ ಸಂಸ್ಕೃತಿಯ ದಟ್ಟವಾದ ವಿವರಗಳನ್ನು ನೀಡುತ್ತಾರೆ. ಮದುವೆ, ಊರಜಾತ್ರೆ, ಯಕ್ಷಗಾನ, ಕಥಾಪ್ರಸಂಗ, ಮದುವೆ, ನಾಮಕರಣ, ಜಾತಕ ನೋಡುವಲ್ಲಿಂದ ಚತುರ್ಥಿ, ನಾಗೋಲೆಯ ವಿವರ, ಕಾಶೀಯಾತ್ರೆ ಉದ್ದಿನ ಮುಹೂರ್ತ ಮುತ್ತೈದೆಯರು ಹಾಡಿದ ಶೋಭನ ಗೀತ ಮುಂತಾದ ಜಾನಪದ ಆಚರಣೆಗಳು ಕಾದಂಬರಿಯಲ್ಲಿ ಹಾಸುಹೊಕ್ಕಾಗಿವೆ."[೨]

ಇಂದಿರಾಬಾಯಿಯಲ್ಲಿ ಬಳಕೆಯಾಗಿರುವ ಭಾಷೆ ಅಂದಿನ ಸಾಮಾಜಿಕ ಸಂದರ್ಭದ ಆಸಕ್ತಿಕರ ಅಂಶಗಳನ್ನು ಸಂವಹನಗೊಳಿಸುವಲ್ಲಿ ಯಶಸ್ವಿಯಾಗಿದೆ. ಕಾದಂಬರಿಯ ವಸ್ತು ಮತ್ತು ತಂತ್ರದ ದೃಷ್ಟಿಯಿಂದ ಭಾಷೆಯನ್ನು ಗುಲ್ವಾಡಿಯವರು ಸಮರ್ಥವಾಗಿ ದುಡಿಸಿಕೊಂಡಿದ್ದಾರೆಂದು ಹೇಳಬಹುದು. ನಿರೂಪಣೆಯ ಭಾಷೆಗೂ ಮತ್ತು ಪಾತ್ರಗಳ ಸಂಭಾಷಣೆಯ ಭಾಷೆಗೆ ವ್ಯತ್ಯಾಸವಿದೆ. ಇದು ಸಾಮಾಜಿಕ ಏಣಿ ಶ್ರೇಣಿಗಳನ್ನು ಸೂಚಿಸುವುದಾಗಿದೆ. ಆ ಮೂಲಕ ಕಾದಂಬರಿಗೆ ಪ್ರಾದೇಶಿಕ ಚೌಕಟ್ಟನ್ನು ದೊರಕಿಸಿಕೊಡುವ ತಂತ್ರಗಾರಿಕೆಯೂ ಆಗಿದೆಯೆಂದರೆ ತಪ್ಪಲ್ಲ.

ಕನ್ನಡದ ಪ್ರಥಮ ಸಾಮಾಜಿಕ ಕಾದಂಬರಿಯೆಂಬ ಹಿರಿಮೆಗೆ ಪಾತ್ರವಾದ 'ಇಂದಿರಾಬಾಯಿ' ಕೃತಿಯು ದೇಸೀ ನೆಲೆಯ ಜೀವನವಿಧಾನವನ್ನು ತನ್ನ ಕಥಾಸಂವಿಧಾನದಲ್ಲಿ ಹಾಸುಹೊಕ್ಕಾಗಿಸಿಕೊಂಡಿದೆ. ಇಲ್ಲಿ ವಿಡಂಬನೆಯೂ ಇದೆ. ಪ್ರಾದೇಶಿಕ ವಿವರಗಳೊಂದಿಗೆ ಸಮಕಾಲೀನ ಸಾಮಾಜಿಕ ಸಂದರ್ಭಗಳ ಚಿತ್ರಣವಿದೆ. ತಾವು ನಂಬಿಕೊಂಡಿರುವ ಮತ್ತು ಭಾವಿಸುತ್ತಿರುವ ಭಾರತೀಯ ಮೌಲ್ಯಗಳ ಮತ್ತು ಪಾಶ್ಚಾತ್ಯ ಸಂಸ್ಕೃತಿಯ ನಡುವಿನ ಸೂಕ್ಷ್ಮ ತಿಕ್ಕಾಟವೂ ಇಲ್ಲಿದೆ.

### ೩.೩ ಕನ್ನಡದ ಪ್ರಮುಖ ಪ್ರಾದೇಶಿಕ ಕಥಾನಕಗಳು

#### ಸಣ್ಣಕಥೆಗಳು

ಕನ್ನಡದಲ್ಲಿ ಸಣ್ಣ ಕಥೆಗಳ ಪ್ರಾಕಾರವು ನವೋದಯ ಕಾಲಘಟ್ಟದಲ್ಲಿ ರೂಪುಪಡೆದ ಸಾಹಿತ್ಯಿಕ ಪ್ರಾಕಾರವಾಗಿದೆ. ನಂತರ ಪ್ರಗತಿಶೀಲ, ನವ್ಯೋತ್ತರ, ಬಂಡಾಯದ ಕಾಲಘಟ್ಟಗಳಲ್ಲಿ ಈ ಪ್ರಾಕಾರವು ಸಮೃದ್ಧವಾಗಿ

ರೂಪುಗೊಂಡಿತು. "೧೯೦೦ ರಲ್ಲಿ ಸುವಾಸಿನಿ ಎಂಬ ಪತ್ರಿಕೆಯಲ್ಲಿ ಪ್ರಕಟವಾದ ದಿ. ಪಂಜೆ ಮಂಗೇಶರಾಯರ ನನ್ನ ಚಿಕ್ಕ ತಾಯಿ, ಭಾರತ ಶ್ರವಣ, ಕಮಲಪುರದ ಹೊಟ್ಲಿನಲ್ಲಿ ಮೊದಲಾದ ಕತೆಗಳೇ ಕನ್ನಡ ಸಣ್ಣಕಥೆಯ ಮೊದಲ ಉದಾಹರಣೆಗಳೆನ್ನಬಹುದು. ಈ ಕತೆಗಳಲ್ಲಿ ಆಧುನಿಕ ಸಣ್ಣಕಥೆಯ ಸ್ವರೂಪ ಇನ್ನೂ ಖಚಿತವಾಗಿ ಒಡಮೂಡಿಲ್ಲ. ಕೆಲವು ಹಾಸ್ಯಪೂರ್ಣ ಪ್ರಸಂಗಗಳನ್ನು ಇವುಗಳಲ್ಲಿ ನಿರೂಪಿಸಲಾಗಿದೆ. ಕೆಲವು ಸಲ ಲಲಿತಪ್ರಬಂಧದ ಕಡೆ, ಕೆಲವು ಸಲ ವ್ಯಕ್ತಿ ಚಿತ್ರದ ಕಡೆ ಇವು ವಾಲುತ್ತವೆ. ಆದರೆ ಪ್ರಾಸಂಗಿಕ ವಾಸ್ತವತಾವಾದದ ಮೂಲಕ ಪ್ರಾದೇಶಿಕ ವಾತಾವರಣವನ್ನು ನಿರ್ಮಿಸುವಲ್ಲಿ ಯಶಸ್ವಿಯಾಗಿವೆ"[೭] ಎನ್ನುವ ಅಭಿಪ್ರಾಯ ವ್ಯಕ್ತವಾಗಿದೆ.

ಕೆರೂರು ವಾಸುದೇವಾಚಾರ್ಯರು ಬರೆದಿರುವ ಸಣ್ಣಕಥೆಗಳೇ ಆಧುನಿಕ ಸಣ್ಣಕಥೆಗಳಿಗೆ ಹತ್ತಿರವಾಗಿವೆಯೆಂಬ ಅಭಿಪ್ರಾಯ ವ್ಯಕ್ತವಾಗುತ್ತದೆ. ಇವರು ಸಾಮಾಜಿಕ, ಐತಿಹಾಸಿಕ, ಪೌರಾಣಿಕ, ಪತ್ತೇದಾರಿ ಮೊದಲಾಗಿ ವೈವಿಧ್ಯಮಯ ಕತೆಗಳನ್ನು ಬರೆದಿದ್ದಾರೆ. "ಇವುಗಳಲ್ಲಿ ಸಾಮಾಜಿಕ ಕಥೆಗಳು ಆಧುನಿಕ ಸಣ್ಣ ಕತೆಯ ಸ್ವರೂಪಕ್ಕೆ ಹೆಚ್ಚು ಸಮೀಪವಾಗಿವೆ ಮತ್ತು ಇವುಗಳಲ್ಲಿಯೇ ಕೆರೂರರ ಸ್ವತಂತ್ರ ಪ್ರತಿಭೆ ಒಡೆದು ಕಾಣುತ್ತದೆ. ಆದರೂ ತಾಂತ್ರಿಕವಾಗಿ ಈ ಕತೆಗಳು ಆಧುನಿಕ ಸಣ್ಣಕತೆಗಳಿಗಿಂತ ಭಿನ್ನವಾಗಿವೆ. ಇವುಗಳಿಗೆ ಸಣ್ಣ ಕತೆಗಳ ಆಕರ್ಷಕ ಆರಂಭವಾಗಲಿ, ಅನಿರೀಕ್ಷಿತ ಮುಕ್ತಾಯಗಳಾಗಲಿ ಇಲ್ಲ. ಒಂದು ಕಥೇಯ ತಾರ್ಕಿಕ ಆರಂಭ, ಮಧ್ಯ, ಮುಕ್ತಾಯಗಳನ್ನು ಕಾಲಾನುಕ್ರಮದಲ್ಲಿ ನಿರೂಪಿಸುವುದು ಈ ಕತೆಗಳ ಲಕ್ಷಣ. ಈ ಕತೆಗಳ ತಂತ್ರವನ್ನು ಕೆರೂರು ಮರಾಠೀ 'ಸಂಪೂರ್ಣ ಕತೆ'ಗಳಿಂದ ಕಲಿತರೆಂದು ತಿಳಿದುಬರುತ್ತದೆ."[೮]

ವಸಾಹತುಶಾಹಿ ಕಾಲಘಟ್ಟದಿಂದ ಮತ್ತು ಅದರಾಚೆ ಸ್ವಾತಂತ್ರ್ಯಾನಂತರದ ಆರಂಭಿಕ ಕಾಲದಲ್ಲಿ ರೂಪುಗೊಂಡ ಸಣ್ಣಕಥೆಗಳಲ್ಲೆಲ್ಲಾ ಪ್ರಾದೇಶಿಕತೆಯ ಅಂಶವೇ ಢಾಳಾಗಿ ಕಂಡುಬರುತ್ತದೆಯೆಂದರೂ ತಪ್ಪಾಗಲಾರದು. ಒಂದು ರೀತಿಯಲ್ಲಿ ರಾಷ್ಟ್ರೀಯತೆಯ ಗುಂಗಿನಿಂದ ಹೊರಬರದ ಸಮಕಾಲೀನ ಎಲ್ಲ ಬರಹಗಾರರು ಸಾಂಪ್ರದಾಯಿಕ ಚೌಕಟ್ಟಿನಲ್ಲಿದ್ದುಕೊಂಡೇ ಪಾಶ್ಚಾತ್ಯ ಬದುಕಿನ ಜೀವನವಿಧಾನ, ನಂಬಿಕೆಗಳ ಪ್ರಭಾವ ಮತ್ತು ಆಧುನಿಕತೆಯ ಪ್ರಭಾವದಿಂದ ಸುಧಾರಣವಾದಿ ನಿಲುವು ತಳೆದುದು ಅವರ ಸೃಷ್ಟಿಶೀಲತೆಯ ಮೇಲೆ ಪ್ರಭಾವ ಬೀರಿತೆನ್ನಬಹುದು. ಹಾಗಾಗಿ ಇಲ್ಲಿ ಬಂದ ಕಥಾನಕಗಳಲ್ಲಿ ತನ್ನತನದ ಅಂದರೆ ದೇಶೀ ನೆಲೆಯ ಹಿರಿಮೆಯನ್ನು ಪ್ರಕಟಪಡಿಸುವ ಉತ್ಸಾಹ ಮತ್ತು ತುರ್ತು ಇದ್ದುದರಿಂದ ಆರಂಭದಲ್ಲಿ ಬಂದ ಕಥಾನಕಗಳೆಲ್ಲವೂ ಒಂದರ್ಥದಲ್ಲಿ ಪ್ರಾದೇಶಿಕವಾದವುಗಳೆನ್ನಬಹುದು.

ಕೆರೂರು ವಾಸುದೇವಾಚಾರ್ಯರ ಮಲ್ಲೇಶಿಯ ನಲ್ಲೆಯರು ಒಂದು ಅರ್ಥಪೂರ್ಣವಾದ ಕಥೆಯಾಗಿದೆಯೆಂದು ವಿಮರ್ಶಕರು ಗುರುತಿಸುತ್ತಾರೆ. ಇದು ಯುವಕನೊಬ್ಬನ ಲೈಂಗಿಕ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವ ನಿಟ್ಟಿನಲ್ಲಿ ಹೆಣೆದ ಕಥೆಯಾಗಿದೆ. ಈ ಕಥೆಯ ಕುರಿತು ಗಿರಡ್ಡಿ ಗೋವಿಂದರಾಜು ಅವರು ಈ ರೀತಿ ವಿವರಿಸುತ್ತಾರೆ. "ಈ ಕತೆಯ ಇನ್ನೊಂದು ವೈಶಿಷ್ಟ್ಯವೆಂದರೆ, ಒಂದು ಕಾಲದ ಜೀವನಕ್ರಮವನ್ನು ಸಹಜವಾದ ವಿವರಗಳ ಮೂಲಕ ಮತ್ತು ಭಾಷೆಯ ಎಚ್ಚರದ ಬಳಕೆಯ ಮೂಲಕ ಹಿಡಿದಿಟ್ಟಿರುವುದು. ಇಲ್ಲಿ ಬರುವ ದಣಿ ಮತ್ತು ಆಳಿನ ನಡುವಿನ ಸಂಬಂಧ ಗತಿಸಿಹೋದ ಕಾಲಕ್ಕೆ ಸೇರಿದ್ದು. ಇದು ಇನ್ನೂ ಶೋಷಣೆ ಎಂಬ ಕಲ್ಪನೆ ಸಾಹಿತ್ಯ ಮತ್ತು ಬದುಕಿನಲ್ಲಿ ಸ್ಪಷ್ಟವಾಗುವುದಕ್ಕಿಂತ ಮುಂಚಿನದು. ಮಲ್ಲೇಶಿ ದಣಿಗಳ ನಂಬಿಗಸ್ತ ಆಳು. ದಣಿಗಳೂ ಅವನ ಬಗ್ಗೆ ವಿಶ್ವಾಸ, ಒಂದು ಸಾವಯವ ಸಮಾಜದಲ್ಲಿ ಮಾತ್ರ ಸಾಧ್ಯವಾಗುವಂಥದು. ಒಂದು ವ್ಯವಸ್ಥೆ ಒಟ್ಟಿನಲ್ಲಿ ಎಷ್ಟೇ ಕೆಟ್ಟದಾಗಿದ್ದರೂ ವ್ಯಕ್ತಿಗಳು ಒಳ್ಳೆಯವರಾಗಿದ್ದರೆ ಮಾನವೀಯ ಸಂಬಂಧಗಳು ಆ ವ್ಯವಸ್ಥೆಯ ಒಳಗೂ ಹಾರ್ದಿಕವಾಗಿ ಬೆಳೆಯಬಲ್ಲ ಸಾಧ್ಯತೆಯನ್ನು ಕತೆ ಸೂಚಿಸುತ್ತದೆ" ಎನ್ನುತ್ತಾರೆ.

ಕನ್ನಡದಲ್ಲಿ ಮೊದಲನೆಯ ಕಥಾಸಂಕಲನವಾಗಿ ಮಾಸ್ತಿಯವರ 'ಕೆಲವು ಸಣ್ಣಕತೆಗಳು' ಎಂಬ ಸಂಕಲನವನ್ನು ಹೆಸರಿಸಲಾಗುತ್ತದೆ. ಮಾಸ್ತಿಯವರ ಈ ಸಂಕಲನದಿಂದಾಗಿ ಕನ್ನಡದಲ್ಲಿ ಸಣ್ಣಕತೆಯ ಪ್ರಕಾರವು ಒಂದು ಸ್ಪಷ್ಟ ರೂಪು ಪಡೆಯಿತೆಂದು ಹೇಳಬಹುದು. ಮಾಸ್ತಿಯವರ ಸಣ್ಣಕಥೆಗಳಲ್ಲಿ ಪ್ರಾದೇಶಿಕತೆಯ ಸ್ವರೂಪವನ್ನು ನಾವು

ಕಾಣಬಹುದಾಗಿದೆ. ಅವರ ವೆಂಕಟಿಗನ ಹೆಂಡತಿ ಮತ್ತು ಜ್ಯೋಗೇರ ಅಂಜೆಪ್ಪನ ಕೋಳಿ ಕಥೆ ಗಳನ್ನು ಇವಕ್ಕೆ ನಿದರ್ಶನವಾಗಿ ನೀಡಬಹುದು.

ದೇವನೂರು ಮಹಾದೇವ ಅವರ ಸಣ್ಣಕಥೆಗಳು ನಂಜನಗೂಡು ಪರಿಸರದ ಉಪಭಾಷೆಯೊಂದರಲ್ಲಿ ರಚಿತವಾದ ಕಥೆಗಳಾಗಿವೆ. ದಲಿತ ಲೋಕದ ಅನುಭಗಳನ್ನು ಕಲಾತ್ಮಕವಾಗಿ ಹಿಡಿದಿಡುವ ಇವರ ಕಥೆಗಳು ಸ್ವರೂಪದಲ್ಲಿ ಆಡುನುಡಿಯೊಂದರ ಮೂಲಕ ರಚನೆಗೊಂಡವುಗಳಾಗಿವೆ. ಇಂತಹ ಆಡುನುಡಿಯನ್ನು ಕಥನಕ್ರಮದ ಎಲ್ಲಾ ಹಂತದಲ್ಲೂ ಪ್ರಾಯೋಗಿಕವಾಗಿ ಬಳಸಿ ಯಶಸ್ಸು ಕಂಡವರು ಅವರು. ಇವರ ನಂತರ ಇವರನ್ನೇ ಅನುಸರಿಸ ಹೊರಟವರಿಗೆ ಇವರ ಕಲೆಗಾರಿಕೆ ಸಿದ್ಧಿಸಲಾಗದೇ ಕೇವಲ ಪ್ರಾದೇಶಿಕ ವಿವರಗಳಲ್ಲಿ ಕಸರತ್ತು ಮಾಡಿದ್ದು ಮಾತ್ರ ಕುತೂಹಲಕಾರಿಯಾಗಿದೆ. ಮೂಲಭೂತವಾಗಿ ಒಂದು ಉತ್ತಮ ಕಥಾನಕ್ಕಿರುವ ವಸ್ತು, ತಂತ್ರ, ನಿರೂಪಣೆ ಇವೆಲ್ಲವನ್ನೂ ಒಳಗೊಂಡಂತೆ ಪೂರಕವಾಗಿ ಅದನ್ನು ಕಲಾಕೃತಿಯನ್ನಾಗಿಸುವ ಪ್ರತಿಭೆ ಮುಖ್ಯವಾಗಿರುತ್ತದೆ.

**೩.೩.೧.೨. ಕನ್ನಡದ ಮಹತ್ವಪೂರ್ಣ ಪ್ರಾದೇಶಿಕ ಕಾದಂಬರಿಗಳು**

**ಇಂದಿರಾಬಾಯಿ**

ಕನ್ನಡದ ಮೊದಲ ಕಾದಂಬರಿಯಷ್ಟೇ ಅಲ್ಲದೆ ಮೊದಲ ಪ್ರಾದೇಶಿಕ ಕಾದಂಬರಿಯೆಂಬುದಾಗಿ ಇಂದಿರಾ ಬಾಯಿಯನ್ನು ಹೆಸರಿಸಲಾಗುತ್ತದೆ. ಶ್ರೀ ಗುಲ್ವಾಡಿ ವೆಂಕಟರಾಯರು ೧೮೯೯ರಲ್ಲಿ ರಚಿಸಿದ ಈ ಕೃತಿ ಅಂದಿನ ಸಾಮಾಜಿಕ ಸಂದರ್ಭ, ಸಮಕಾಲೀನ ಸಂಘರ್ಷಗಳನ್ನು ದಾಖಲಿಸಲು ಪ್ರಯತ್ನಿಸಿದ್ದಾರೆ. ಈ ಕಾದಂಬರಿಯ ಸಾರಾಂಶ ಹೀಗಿದೆ. "ಕಮಲಪುರ ಎಂಬ ನಗರದಲ್ಲಿ ನರಸಿಂಹ ಶಾಸ್ತ್ರಿ ಎಂಬ ವರ್ತಕನ ಕಾರ್ಖಾನೆಯಲ್ಲಿ ಶಾನುಭೋಗನಾಗಿರುವ ಹಂಪೆ ಭೀಮರಾಯ ಒಬ್ಬ ಸಭ್ಯ ಗೃಹಸ್ಥ. ಅವನ ಹೆಂಡತಿ ಅಂಬಾಬಾಯಿ ಅದೇ ಊರಲ್ಲಿ ಸೂದರ ರಾಯನೆಂಬ ಇನ್ನೊಬ್ಬ ಗೃಹಸ್ಥ ಅಗ್ರಹಾರದಲ್ಲಿ ವಾಸವಾಗಿದ್ದನು. ಅವನ ಹೆಂಡತಿ ಸುಶೀಲೆ. ಅವರ ಮಗನೆ ಭಾಸ್ಕರ. ಸುಂದರ ರಾಯ ಹಬ್ಬಿಸಿದ ಸುದ್ಧಿಯಿಂದ ಕ್ರುದ್ಧಳಾದ ಅಂಬಾಬಾಯಿ ಆತನನ್ನು ಕೊಲ್ಲುವಂತೆ ಗಂಡನನ್ನು ಪ್ರಚೋದಿಸುತ್ತಾಳೆ. ನರಸಿಂಹ ಶಾಸ್ತ್ರಿಗೂ ಅಂಬಾಬಾಯಿಗೂ ಅನೈತಿಕ ಸಂಬಂಧವಿದೆ ಎನ್ನುವ ಗುಲ್ಲು ಹುಟ್ಟಿಸಿದವನು ಸುಂದರರಾಯ ಎಂಬುದು ಅಂಬಾಬಾಯಿಯ ತಿಳಿವಳಿಕೆ. ಕೊನೆಗೆ ಭೀಮರಾಯ ವಿಷ ಹಾಕಿಸಿ ಸುಂದರರಾಯನನ್ನು ಕೊಲ್ಲಿಸುತ್ತಾನೆ. ಪೋಲೀಸರಿಗೆ ಲಂಚ ನೀಡಿ ಆತ ಕೊಲೆಯ ಆಪಾದನೆಯಿಂದ ಪಾರಾಗುತ್ತಾನೆ. ಭೀಮರಾಯನ ಗುರುಗಳು ಜಾತಿಯವರ ಸಭೆಗೆ ಧರ್ಮ ವಿಚಾರಕನಾಗಿ ನೇಮಕಗೊಳ್ಳುತ್ತಾನೆ. .... ... ಭೀಮರಾಯನ ಮಗಳೇ ಇಂದಿರಾಬಾಯಿ. ಅವಳ ಗಂಡ ವಿಠ್ಠಲರಾಯ ವಿಷಯ ಲಂಪಟನಾಗಿ ಸೂಳೆಯರ ಸಂಗ ಮಾಡಿ ಕೊನೆಗೊಂದು ದಿನ ಸಾಯುತ್ತಾನೆ. ಆಗ ಇಂದಿರೆಗೆ ಹನ್ನೊಂದು ಕಳೆದು ಹನ್ನೆರಡು ವರ್ಷ ವಯಸ್ಸು. ಅಂದರೆ ವಿಧವೆಯಾಗುವ ಪೂರ್ವದಲ್ಲಿ ಅವಳಿನ್ನೂ ಕುಮಾರಿಯಾಗಿಯೇ ಉಳಿದಿದ್ದಾಳೆ. ವಯಸ್ಸಿಗೆ ಮೊದಲೆ ಶೋಭನ ಪ್ರಸ್ಥ ಮಾಡಿದರೆ ಅದು ಕಾನೂನ ಬಾಹಿರ ಸಂಗತಿಯಾಗಿತ್ತು. ನಂತರ ಕಥೆಯಲ್ಲಿ ಇಂದಿರಾ ಬಾಯಿಯ ವೈಧವ್ಯದ ಚಿತ್ರಣ ಬರುತ್ತದೆ. ಸಮಾಜ ಅವಳನ್ನು ನೋಡುವ ಪರಿಯನ್ನು ವರ್ಣಿಸಲಾಗಿದೆ. ತಂದೆ ಭೀಮರಾಯ ಮಗಳ ಪರವಹಿಸುತ್ತಾನೆ. ಕಾದಂಬರಿಯಲ್ಲಿ ಹರೆಯದ ವಿಧವೆಯನ್ನು ತಮ್ಮ ಕಾಮಲೋಲುಪತೆಗೆ ಬಳಸಿಕೊಳ್ಳುವ ವಿವರಗಳೂ ಬರುತ್ತವೆ. ಇದೆಲ್ಲದರಿಂದ ಪಾರಾಗಿ ಇಂದಿರಾಬಾಯಿ ಮುಂಬಯಿಗೆ ಹೋಗಿ ಮೆಟ್ರಿಕ್ಯುಲೇಶನ್ ಮುಗಿಸಿ ವಿದೇಶದಿಂದ ವಿದ್ಯಾಭ್ಯಾಸ ಮುಗಿಸಿ ಬಂದ ಭಾಸ್ಕರಾಯನನ್ನು ಮದುವೆಯಾಗುತ್ತಾಳೆ. ಇದಕ್ಕೆ ಸಾಂಪ್ರದಾಯಿಕ ಸಮಾಜದಿಂದ ಪ್ರತಿರೋಧ ಎದುರಾದರೂ ಅವ್ಯಾವೂ ಅಂತಹ ಪರಿಣಾಮಗಳನ್ನು ಬೀರುವುದಿಲ್ಲ. ಇದು ಕಾದಂಬರಿಯ ಕಥಾಹಂದರವಾಗಿದೆ. ಮನೆಯ ಮಾತು ಕೊಂಕಣಿ, ಸುತ್ತಲಿನ ಭಾಷೆ ತುಳು, ಬರೆಯುವ ಭಾಷೆ ಕನ್ನಡ, ಇದರ ಫಲವಾಗಿ ಮೂಡಿ ಬಂದಿರುವ ಭಾಷಿಕ ಸಮ್ಮಿಶ್ರಣ ಕಾದಂಬರಿಯು ಪ್ರಾದೇಶಿಕತೆಯೊಂದನ್ನು ಹಿಡಿದಿಟ್ಟಿದೆಯೆನ್ನಬಹುದು.

**ಕಾನೂರು ಸುಬ್ಬಮ್ಮ ಹೆಗ್ಗಡತಿ**

ಕುವೆಂಪುರವರ ಕಾನೂರು ಸುಬ್ಬಮ್ಮ ಹೆಗ್ಗಡತಿ ಕಾದಂಬರಿಯು ಮಲೆನಾಡಿನ ಜೀವನಚಿತ್ರಣವನ್ನು ಆ ನೆಲದ ಪ್ರಾದೇಶಿಕ ವಿವರಗಳೊಂದಿಗೆ ನೀಡುವ ಅದ್ಭುತ ಕಲಾಕೃತಿಯಾಗಿದೆ. ಏಕಕಾಲಕ್ಕೆ ಈ ಕೃತಿಯು ಕನ್ನಡ ಗದ್ಯಕ್ಕಿರುವ ಅಭಿವ್ಯಕ್ತಿ ಸಾಮರ್ಥ್ಯವನ್ನೂ ಮತ್ತು ದೇಸೀ ಸೊಗಡನ್ನು ನಿರೂಪಿಸಬಹುದಾದ ಸಾಧ್ಯತೆಗಳನ್ನು ತೋರಿಸಿಕೊಟ್ಟ ಕೃತಿಯಾಗಿದೆ. ಅಷ್ಟೇ ಅಲ್ಲದೆ ಈ ನಿಟ್ಟಿನಲ್ಲಿ ಕೃತಿ ಅತ್ಯಂತ ಯಶಸ್ವಿಯಾದ ಕೃತಿಯೆಂದು ಹೇಳಬಹುದಾಗಿದೆ. "ಒಂದು ಕೃತಿ ಸಂವಹನದ ದೃಷ್ಟಿಯಿಂದ ಪ್ರಾದೇಶಿಕತೆಯನ್ನು ಗಮನಿಸಬೇಕಾದ ಅವಶ್ಯಕತೆಯಿದೆ. ಅತಿಯಾದ ಪ್ರಾದೇಶಿಕಾಂಶಗಳಿಂದ ಕೃತಿ ಎಷ್ಟೇ ಉತ್ತಮವಾಗಿದ್ದರೂ ಕೃತಿಯ ಸಂವಹನಶೀಲತೆಗೆ ಭಂಗ ಬರುತ್ತದೆ. ಒಂದು ಪ್ರದೇಶದ ವಿಶಿಷ್ಟ ವಿವರಗಳು ಮತ್ತೊಂದು ಪ್ರದೇಶದ ಜನರಿಗೆ ಅಪರಿಚಿತವೆನಿಸುವುದರಿಂದ ಅವು ಅವನಿಗೆ ಅರ್ಥವಾಗುವುದಿಲ್ಲ. ಬದುಕಿನ ವಿವರಗಳನ್ನು ಅರ್ಥಮಾಡಿಕೊಳ್ಳಲು ಓದುಗನಿಗೆ ಹೊರಗಿನ ಸಹಾಯ ಬೇಕಾಗುತ್ತದೆ. ಈ ಹೊರಗಿನ ಸಹಾಯ ಕೃತಿಯನ್ನು ಜನಪ್ರಿಯಗೊಳಸಿಲು ತಡೆಯೊಡ್ಡುತ್ತದೆ ಅಷ್ಟೇ ಅಲ್ಲ, ಆ ಕೃತಿಯ ವಸ್ತು ಎಷ್ಟೇ ಉತ್ತಮವಿದ್ದರೂ ಅದು ತನ್ನೆಲ್ಲ ಅರ್ಥವಂತಿಕೆಯೊಡನೆ ಓದುಗನಿಗೆ ಮುಟ್ಟುವುದಿಲ್ಲ. ಇದರಿಂದಾಗಿ ಕೃತಿಯ ಸಾಫಲ್ಯಕ್ಕೆ ಅರ್ಥವಂತಿಕೆಯೊಡನೆ ಓದುಗನಿಗೆ ಮುಟ್ಟುವುದಿಲ್ಲ. ಇದರಿಂದಾಗಿ ಕೃತಿಯ ಸಾಫಲ್ಯಕ್ಕೆ ಕುಂದುಬರುತ್ತದೆ.

" ಆದರೆ ಇಲ್ಲಿರುವ ಪ್ರಶ್ನೆ ಪ್ರಾದೇಶಿಕತೆಯನ್ನು ಬಳಸಿಕೊಂಡು ಸಂವಹನವನ್ನು ಕೂಡ ಸಾಧಿಸುವುದು ಹೇಗೆ? ಎಂಬುದು. ಈ ಪ್ರಶ್ನೆಗೆ ಉತ್ತರವೆಂಬಂತೆ ಕನ್ನಡದ ಸಂದರ್ಭದಲ್ಲಿ ಕುವೆಂಪು ಅವರು ತಮ್ಮ ಕಾದಂಬರಿಗಳಲ್ಲಿ ಉತ್ತರವನ್ನು ಕಂಡಿದ್ದಾರೆ. ಒಬ್ಬ ಕಲಾವಿದ ಜನತೆಗಾಗಿ ಬರೆಯುತ್ತಾ ತನ್ನ ಕೃತಿಯನ್ನು ಶ್ರೇಷ್ಠ ಕಲೆಯನ್ನಾಗಿಯೂ ಮಾಡಬಲ್ಲ ಶಕ್ತಿವಂತನಾಗಿರುತ್ತಾನೆಂಬುದಕ್ಕೆ ಇವರ ಕಾದಂಬರಿಗಳು ಉದಾಹರಣೆಯಾಗಿ ನಿಲ್ಲುತ್ತವೆ. ಮಲೆನಾಡಿನ ಬೆಟ್ಟ, ಕಾಡು ಬಯಲು, ಸಮಾಜ ಜೀವನ, ಅದರ ಮೂಲೆ ಮಗ್ಗಲನ್ನು ಆವರಿಸಿಕೊಳ್ಳುವ ಕುವೆಂಪು ಕಾದಂಬರಿಗಳು, ಅದೇ ಸಂದರ್ಭದಲ್ಲಿ ತನ್ನ ಪ್ರತಿಮಾಸೃಷ್ಟಿಯಲ್ಲಿ ಉದ್ಭುತ ಕಲೆಗಳಾಗಿ ನಿಲ್ಲುತ್ತವೆ. ಪ್ರತಿಯೊಂದು ವಿವರವೂ ವಿಶಿಷ್ಟಾರ್ಥ ಪಡೆದುಕೊಂಡು ನಿಲ್ಲುವ ರೀತಿ ಬೆರಗುಗೊಳಿಸುವಂಥದ್ದು." ಎನ್ನುವ ಅಭಿಪ್ರಾಯದೊಂದಿಗೆ ಏಕೀಭವಿಸಬಹುದಾಗಿದೆ.

**ಕೊನೆ ಟಿಪ್ಪಣಿಗಳು**

೧. ಶಿವರಾಮ ಪಡಿಕ್ಕಲ್, ನಾಡು ನುಡಿಯ ರೂಪಕ, ಪು. ೭

೨. ಕನ್ನಡ ಕಾದಂಬರಿಗಳಲ್ಲಿ ಪ್ರಾದೇಶಿಕತೆ, ಪು. ೫

೩. ಶಿವರಾಮ ಪಡಿಕ್ಕಲ್, ನಾಡು ನುಡಿಯ ರೂಪಕ, ಪು. ೭

೪. ಓ. ಎಲ್. ನಾಗಭೂಷಣ ಸ್ವಾಮಿ, ವಿಮರ್ಶೆಯ ಪರಿಭಾಷೆ, ಪು. ೨೪೩

೫. ಶಿವರಾಮಪಡಿಕ್ಕಲ್, ನಾಡು ನುಡಿಯ ರೂಪಕ, ಪು.೩೩

೬. ಅದೇ., ಪು. ೩೪

೭. ಕನ್ನಡ ಕಾದಂಬರಿಗಳಲ್ಲಿ ಪ್ರಾದೇಶಿಕತೆ, ಪು. ೨೩

೮. ಡಾ. ಗಿರಡ್ಡಿ ಗೋವಿಂದರಾಜ್, ಸಮಗ್ರ ವಿಮರ್ಶೆ, ಸಂಪುಟ ೨, ಪು. ೩೯೫

ಬಳ್ಳಾರಿ ಜಿಲ್ಲೆಯ ಕಥನ ಸಾಹಿತ್ಯವನ್ನು ಪ್ರಾದೇಶಿಕತೆಯ ನೆಲೆಯಲ್ಲಿ ವ್ಯಾಖ್ಯಾನಿಸುವಾಗ ಪ್ರಧಾನವಾಗಿ ಗಮನಿಸಬೇಕಾದ ಹೆಸರು ವೀರಭದ್ರ ಅವರದು. ನಂತರ ಇವರ ಹೆಸರಿನವರೇ ಆದ ಕುಂ. ವೀರಭದ್ರಪ್ಪ ಅವರ ಕಥೆಗಳನ್ನು ಪರಿಶೀಲಿಸಬಹುದಾಗಿದೆ. ಅಪ್ಪಟ ಬಳ್ಳಾರಿ ನೆಲದ ಪ್ರಾದೇಶಿಕ ವೈಶಿಷ್ಟ್ಯಗಳನ್ನು ಮೈಗೂಡಿಸಿಕೊಂಡು ಇಲ್ಲಿನ ಆಡುನುಡಿಯಲ್ಲಿ ಮೈತಾಳಿವೆಯೆಂದು ಹೇಳಲಾಗುತ್ತಿರುವ ಕುಂವೀ ಅವರ ಕಥೆಗಳಿಗಿಂತ ಭಿನ್ನವಾಗಿರುವ ಮತ್ತು ಬಳ್ಳಾರಿ ಸುತ್ತ ಮುತ್ತಲಿನ ಪರಿಸರ, ಆಡುನುಡಿ, ಪ್ರಾದೇಶಿಕತೆಯನ್ನು ನಾವು ನಿರ್ವಚಿಸಲಾಗುತ್ತಿರುವ ಪ್ರಾದೇಶಿಕತೆಗೆ ಹೆಚ್ಚು ಹತ್ತಿರವಿರುವ ಅರ್ಥಪೂರ್ಣ ಮತ್ತು ಕುಂವೀ ಅವರಿಗಿಂತಲೂ ಕಲೆಗಾರಿಕೆಯಲ್ಲಿ ಉನ್ನತ ಮಟ್ಟದಲ್ಲಿರುವ ಕಥೆಗಳನ್ನು ನೀಡಿದವರು ವೀರಭದ್ರ ಅವರು. ಕುಂವೀ ಅವರ ಕಥೆಗಳಲ್ಲಿ ಅಭಿವ್ಯಕ್ತಗೊಂಡ ಪ್ರಾದೇಶಿಕತೆಯನ್ನು ನಂತರ ನಿರೂಪಿಸಲಾಗುವುದು.

**ವೀರಭದ್ರ ಅವರ ಕಥೆಗಳು**

ಈ ಮೇಲೆ ವಿವರಿಸಿದಂತೆ ವೀರಭದ್ರ ಅವರ ಕಥೆಗಳು ನಿಜ ಅರ್ಥದಲ್ಲಿ ಬಳ್ಳಾರಿ ಜಿಲ್ಲೆಯ ಪ್ರಾದೇಶಿಕತೆಯನ್ನು ಧ್ವನಿಸುವ, ಅಪ್ಪಟ ಈ ನೆಲದ ಭಾಷಿಕ ವೈವಿಧ್ಯತೆಯನ್ನು ಸಂಸ್ಕೃತಿಯನ್ನು ಆ ಮೂಲಕ ಇಲ್ಲಿನ ಸಮುದಾಯಗಳೊಟ್ಟಿನ ಸಂಘರ್ಷದ ಬದುಕನ್ನು ಯಾವುದೇ ಅತಿರೇಕ, ವೈಭವೀಕರಣ, ಅತಿರಂಜಿತವೆನ್ನಿತಬಹುದಾದ ಶೈಲಿಯಲ್ಲದೆ ಸಹಜ ಶೈಲಿಯಲ್ಲಿ ನಿರೂಪಿಸಿರುವುದು ವಿಶಿಷ್ಟವಾದುದಾಗಿದೆ. ಇದೆಲ್ಲಕ್ಕಿಂತಲೂ ಹೆಚ್ಚಿನದಾಗಿ ಇಲ್ಲಿನ ಕಥೆಗಳಲ್ಲಿ ಅಂತರ್ಗತವಾದ ನೈತಿಕ ಎಚ್ಚರ ಕಥೆಗಳ ಮೌಲಿಕತೆಯನ್ನು ಹೆಚ್ಚಿಸಿದೆ. ಇವರ ಪ್ರಾದೇಶಿಕತೆಯನ್ನು ವಸ್ತುವಾಗುಳ್ಳ ಕಥೆಗಳನ್ನು ಈ ಕೆಳಗೆ ಆ ಕಥೆಗಳು ಧ್ವನಿಸುವ ಪ್ರಾದೇಶಿಕತೆಯ ಸ್ವರೂಪ, ಆಶಯ ಮತ್ತು ಒಟ್ಟಾರೆ ಕಥೆಯ ಪರಿಣಾಗಳನ್ನು ಚರ್ಚಿಸಲಾಗಿದೆ.

**ಕೈ ಬೀಸಿತು ಹೆಣ**

ಕಥೆ ಆರಂಭವಾಗುವುದು ಹೀಗೆ –

> **"ಕೈಬಿಸಿತು ಹೆಣ - ಯಾವುದೋ ಒಂದು ಸಂವತ್ಸರದಲ್ಲಿ, ಅದಾವುದೋ ಒಂದು ಮಾಸದಲ್ಲಿ ಅದೆಂಥದೋ ಒಂದು ದಿನ - ಹಗಲು ಜಾರಿ, ಇರುಳು ಮುಸುಕಿದ ತಂಪು ಹೊತ್ತಿನಲ್ಲಿ ಆದವಾನಿಗೆ ಹದಿಮೂರು ಮೈಲುಗಳ ದೂರದಲ್ಲಿರುವ ಬದನೇಹಾಳು ಗ್ರಾಮದಲ್ಲಿ ಒಂದು ಮನೆಯಲ್ಲಿ ಒಂದು ಹೆಣ - ಕೈಬೀಸಿತು...!**
>
> **ಮತಾಪು ಹಚ್ಚಿದಂತೆ, ಅಗ್ನಿ ವೃಷ್ಟಿಗೈಯುತ್ತಿದೆಯೋ ಎಂಬಂತೆ ಉರಿಯುತ್ತಿರುವ ಬಿಸಿಲಿನಲ್ಲಿ ಮಟ ಮಟ ಮಧ್ಯಾಹ್ನದಲ್ಲಿ - ಆ ಹಳ್ಳಿಗೆಲ್ಲಾ ಅತ್ಯಂತ ವಯಸ್ಕಳೂ, ಅತಿ ಐಶ್ವರ್ಯವಂತಳೂ, ಮೇಲಾಗಿ ಅನೇಕ ವರ್ಷಗಳಿಂದ ಒಬ್ಬಂಟಿಗಳಾಗಿಯೇ ಬಾಳಿದ, ಜೀರ್ಣವಿದೀರ್ಣಗೊಂಡ, ಶಲ್ಯಪ್ರಾಯಳಾದ ಆ ಮುದುಕಿ - ಅಷ್ಟು ದೋ - ಡ್ಡ ಕೋಣೆಯಲ್ಲಿ ಸದ್ದುಸಪ್ಪಳಗಳಿಲ್ಲದೆ, ಏದುಸಿರು ಬಿಡುತ್ತ, ಕಣ್ಣಿ ಪಾಪೆಗಳನ್ನು ಅತ್ತಿಂದ ಇತ್ತ, ಇತ್ತಿಂದ ಅತ್ತ ತಿರುಗಿಸುತ್ತ,**

**ಹನ್ನೆರಡಂಕಣದ ಆ ದೊಡ್ಡ ಮನೆಯನ್ನು - ಮಹಾ ಬಾಧೆ ತುಂಬಿದ, ಇಡೀ ವ್ಯಥೆಯೆಲ್ಲಾ ಒಮ್ಮೆಗೇ ನೀರಾಗಿ ನಿಂತ ದೃಕ್ಕುಗಳಿಂದ ನಿರುಕಿಸಿ, ಪುನಃ ಪುನಃ ನಿರುಕಿಸಿ ನೋಡಲಾರದೆ, ನೋಡದಂತಿರಲಾರದೆ, ಕಣ್ಣುಬಿಟ್ಟುಕೊಂಡೇ, ಪ್ರಾಣ ಬಿಟ್ಟಿತು...!"**

ಎಂದು ಸಾಗುವ ನಿರೂಪಣೆಯು ಆ ಮುದುಕಿಯ ಶವಸಂಸ್ಕಾರದ ಸಿದ್ಧತೆಗಳನ್ನು ವಿವರಿಸುತ್ತಾ ಸಾಗುತ್ತದೆ. ಆ ಹನ್ನೆರಡಂಕಣದ ಮನೆಯಲ್ಲಿ ಸದ್ದುಗದ್ದಲವಿಲ್ಲದೇ ಇರುವುದು, ಅಂಗಳದಲ್ಲಿ ಮುಸುಕಿದ್ದ ಕತ್ತಲು, ಆ ದೊಡ್ಡ ಮನೆಯಲ್ಲಿ ಕಾಡಿಗೆ ಮೆತ್ತಿಕೊಂಡಂತೆ ಕಂಕಾಳದೊಳಗಿನ ಕಪ್ಪುಕತ್ತಲೆಯಾಗಿ ಕರ್ರಗೆ ನಿಂತುಕೊಂಡಂತೆನಿಸಿ ಇನ್ನೊಂದು ಮುದುಕಿ ನಾನಾದ್ರೂ ಒಂದೀಟು ದೀಪ ಹಚ್ಚಿ ಬರ್‍ತೀನಮ್ಮಾ, ಎಂದು ಒಳಗೆ ಹೋಗಿ ನೋಡಲಾಗಿ ಆ ಮುದುಕಿ ಸತ್ತು ಬಿದ್ದಿತ್ತು. ಈ ಮುದುಕಿಯಿಂದ ವಿಷಯ ಗೊತ್ತಾದ ಊರಿನ ಹಿರಿಯರು ಎಲ್ಲರೂ ಸೇರಿ ಶವ ಸಂಸ್ಕಾರದ ಏರ್ಪಾಟು ಮಾಡತೊಡಗಿದರು. ಅದೇ ವೇಳೆಗೆ ಈ ಮುದುಕಿಗೊಬ್ಬ ಮೊಮ್ಮಗಳಿರುವುದು ಅವಳನ್ನೂ ಯಾವುದೋ ದೂರದ ಊರಿಗೆ ಮದುವೆ ಮಾಡಿಕೊಟ್ಟಿರುವುದು ನೆನಪಾಗುತ್ತದೆ. ಅವಳನ್ನು ಕರೆಸಲು ತಂತಿ ಸಹ ಕೊಟ್ಟು ಬರಲಾಗುತ್ತದೆ. ನಂತರ ಆ ಮುದುಕಿಯನ್ನು ಬಿಟ್ಟು ಮನೆಯಲ್ಲಿ ಬೇರಾರೂ ಇಲ್ಲದ್ದರಿಂದ ಎಲ್ಲಾ ದೈವಸ್ಥರ ಸಮ್ಮುಖದಲ್ಲಿ ಜಾಯಿಕಾಯಿ ಪೆಟ್ಟಿಗೆಯ ಬೀಗವನ್ನು ಹೊಡೆದು ಒಡವೆ, ವಸ್ತ್ರ, ಹಣ ಎಲ್ಲವನ್ನೂ ತೆಗೆದಿಟ್ಟು ಗ್ರಾಮಸ್ಥರ ಸಮ್ಮುಖದಲ್ಲಿ ಲೆಕ್ಕಹಾಕಿ ಅದನ್ನು ಶವಸಂಸ್ಕಾರದ ನಂತರ ವಾರಸುದಾರರಿಗೆ ಒಪ್ಪಿಸಲು ನಿರ್ಧರಿಸಿ ಆ ಒಡವೆ, ವಸ್ತ್ರ, ಹಣವನ್ನೆಲ್ಲಾ ಹೆಣವನ್ನು ಗುಟ್ಟಿಗೆ ಬಡಿದು ಅದರ ಎದುರಿನಲ್ಲಿ ಇಡಲಾಯಿತು. ನಂತರ ರಾತ್ರಿ ಹೊತ್ತು ಹೆಣವನ್ನು ಕಾಯುವರಾರೆಂಬ ಪ್ರಶ್ನೆ ಉದ್ಭವಿಸಿದಾಗ ಈ ದೀಪ ಹಚ್ಚಿದ ಮುದುಕಿ ನಾನು ಕಾಯುತ್ತೇನೆಂದು ಧೈರ್ಯವಾಗಿ ಒಪ್ಪಿಕೊಂಡಿತು.

ನಂತರ ಆ ಕತ್ತಲ ಮನೆಯಲ್ಲಿ ದೀಪದ ಬೆಳಕಲ್ಲಿ ಕಂಬಕ್ಕಾನಿಸಿ ಗುಟ್ಟಿಗೆ ಬಡಿದ ಹೆಣವನ್ನು ಕಾಯುತ್ತಾ ಕೂತಿದ್ದ ಆ ಮುದುಕಿಯ ನೆನಪಿನ ಸರಳಿಯಾಗಿ ಸತ್ತ ಮುದುಕಿಯ ಬದುಕಿನ ಸುರುಳಿ ಬಿಚ್ಚಿಕೊಳ್ಳುತ್ತದೆ. ಸತ್ತ ಶರಭಮ್ಮ ಮುದುಕಿಯು ಹನ್ನೆರಡಂಕಣದ ಈ ಮನೆಗೆ ಸೊಸೆಯಾಗಿ ಸೇರಿಕೊಂಡವಳು. ಅವಳು ಮದುವೆಯಾಗುವ ಹೊತ್ತಿಗಾಗಲೇ ಅವಳ ತಂದೆ, ತಾಯಿ, ಬಂಧು ಬಳಗ ಎಲ್ಲರೂ ಪ್ಲೇಗಿನಿಂದ ಸತ್ತಿದ್ದರು. ಇವಳ ಗಂಡ ಹೇಳುವಂತೆ ಇವಳ ಕಾಲ್ಗುಣವೋ ಎಂತೋ ಆ ಮನೆ ದಿನದಿಂದ ದಿನಕ್ಕೆ ವೃದ್ಧಿ ಹೊಂದುತ್ತಾ ಸಾಗಿತು. ಅದೂ ಸಹಜವಾಗಿಯಲ್ಲದೆ 'ಉಗುಳಿಗೆ ಉಗುಳು ಗಂಟುಹಾಕುತ್ತಾ, ಕೈಗೆ ಸಿಕ್ಕೋರ್‍ನೆಲ್ಲಾ ಪಾತಾಳಕದ್ದಿ... ಮಾಡ್‌ಬಾರ್‍ದ ಹೊಲೇಗೆಲ್ಲಾನೆಲ್ಲಾ ಮಾಡಿ, ಕೊನೀಗೆ ಮುಂಡಾಮೋಚಿಕೊಂಡೋದ'. ಈ ಹೆಣ ಕಾಯುತ್ತಿದ್ದ ಮುದುಕಿಯ ಮನೆ ಮಠವನ್ನೆಲ್ಲಾ ಸತ್ತ ಆ ಮುದುಕಿಯ ಗಂಡ ತಾನು ಸಾಯುವ ಹಿಂದಿನ ದಿನವೇ ತನ್ನ ಹೆಸರಿಗೆ ಬರೆಯಿಸಿಕೊಂಡು ಸತ್ತದ್ದನ್ನು ಹೆಣ ಕಾಯುತ್ತಿರುವ ಈ ಮುದುಕಿ ಸ್ವಗತವೆಂಬಂತೆ ನೆನಪಿಸಿಕೊಂಡು 'ಶನ್ಯೇಸ್‌ನನ್ ಹಾಟಗಳ್ಳ' ಎಂದು ಮುಖ ಸಿಂಡರಿಸಿಕೊಂಡು ಗೊಣಗಿಕೊಳ್ಳುತ್ತಾಳೆ. ಸತ್ತ ಶರಭಮ್ಮ ಕೂಡ ಹಣಕಾಸಿನ ವ್ಯವಹಾರದಲ್ಲಿ ಗಂಡನಿಗೆ ಸಮಳಾಗಿಯೇ ಇದ್ದಳು. ಇದನ್ನು ಕಥೆಗಾರರು ವಿವರಿಸುವುದು ಹೀಗೆ. ಶರಭಮ್ಮನವರ ಮನೆಯ ಮೇಲೆ ಮಹಡಿ ನಿಂತಿತು; ಹಾಗೆ ನಿಂತಿದ್ದು ಅವರ, ಅಂದರೆ ಗಂಡ-ಹೆಂಡತಿಯರಿಬ್ಬರ ಮನಸ್ಸಿನ ತಿಪ್ಪೆಗಳಿಗಿಟ್ಟ ಕಳಸಪ್ರಾಯವಾಗಿತ್ತು! ಗಂಡ-ಹೆಂಡತಿ; ಹೆಂಡತಿ-ಗಂಡ ಒಬ್ಬರಿಗೊಬ್ಬರು ಸೇರಿಗೆ ಸವಾಸೇರು!

ಸತ್ತ ಶರಭಮ್ಮನಿಗೆ ಒಬ್ಬಳೇ ಒಬ್ಬಳು ಮಗಳು ಹುಟ್ಟಿದಳು. ಆಮೇಲೆ ಅವಳಿಗೆ ಮಕ್ಕಳೇ ಆಗಲಿಲ್ಲ. ಅವಳು ಬೆಳೆದು ಮದುವೆಯೂ ಆಯಿತು. ಹೆಣ್ಣುಮಗುವೊಂದು ಜನಿಸಿತು. ಸೂತಿಕಾಗೃಹದಲ್ಲಿಯೇ ಶರಭಮ್ಮನ ಮಗಳು ಈ ಹೆಣ್ಣು ಕೂಸಿಗೆ ಜನ್ಮವಿತ್ತು ಕಣ್ಮುಚ್ಚಿದ್ದರಿಂದ ಮೊರದಲ್ಲಿದ್ದ ಆ ಕೂಸು ಶರಭಮ್ಮನ ಕೈಗೆ ಬಂತು. ತಾಯಿಯಿಲ್ಲದ ತಬ್ಬಲಿ ಕೂಸು ಗೊಲ್ಲರ ಹೆಣ್ಣುಮಗಳ ಎದೆಹಾಲು ಕುಡಿಯುತ್ತಾ ಬೆಳೆಯತೊಡಗಿತು. ಈಗಿರಲು ಒಂದು ಶರಭಮ್ಮನ ಗಂಡ ಹೊಲದಿಂದ ಬಂದವನೇ ನೀರು ನೀರು ಎಂದು ಹೇಳುತ್ತಿರುವಂತೆಯೇ

ಪ್ರಾಣಬಿಟ್ಟನು. ಶರಭಮ್ಮ ತಾನು ರಂಡೆಯಾಗಲು 'ಈ ಶನಿ ಬಂದಿದ್ದು ಬಂದಿದ್ದೇ ನಾನು ರಣಮುಂಡೆಯಾಗ್ಬಿಟ್ಟೆ ಅಂತ ಸರಬುಸು ಮಾಡ್ತಿದ್ಲು'. ನಂತರ ಹತ್ತು ವರುಷಗಳು ತುಂಬುತ್ತಿದ್ದಂತೆಯೇ ಈ ಶನಿ ಸಮೀಪದಲ್ಲಿರಬಾರದೆಂದು ಆ ಮೊಮ್ಮಗಳನ್ನು ದೂರದ ಪ್ರಾಂತ್ಯಕ್ಕೆ ಮದುವೆ ಮಾಡಿಕೊಟ್ಟುಬಿಟ್ಟಳು.

ಇಷ್ಟಾದರೂ ಬಂಧು ಬಳಗ ಯಾವುದೂ ಇಲ್ಲದ, ಮೊಮ್ಮಗಳಿದ್ದರೂ ಅದನ್ನು ದೂರವಿಟ್ಟ ಈ ಮುದುಕಿಯ ಸ್ವಾರ್ಥ ಮಾತ್ರ ಹೋಗಲಿಲ್ಲ. ಅದೆಷ್ಟೋ ಜನರ ಜೀವನದ ಜೊತೆ ಆಟಾವಡಿದಳು. ತಾನು ಕೊಟ್ಟ ಸಾಲಕ್ಕೆ ಅನ್ಯಾಯದ ಬಡ್ಡಿ ಹಾಕಿ ಮನೆ ಮಠ ಕಳೆದಳು. ಅದೆಷ್ಟೋ ಜನ ಕಣ್ಣೀರಿನಲ್ಲಿ ಕೈತೊಳೆದರು. ಇಂತಹ ಶರಭಮ್ಮನ ಹೆಣವನ್ನು ಕಾಯುತ್ತಾ ಕುಳಿತಿದ್ದ ಆ ಮುದುಕಿ ಸ್ವಗತವೆಂಬಂತೆ ಮಾತಾಡಿಕೊಳ್ಳುವುದು ಅವಳ ಸ್ವಭಾವ ಮತ್ತು ವ್ಯಕ್ತಿತ್ವವನ್ನು ಹೇಳುವುದು ಹೀಗೆ. "ಎಂಜಲು ಕೈಲಿ ಕಾಕೀನ ಹೊಡಿಲಿಲ್ಲ. ನಾಕು ಮಂದಿಗಿಟ್ಟು ಸಂಬ್ರಂಭ ಪಡ್ಲಿಲ್ಲ. ತಾನನ್ನಾ ತಿಂದಂಗಲ್ಲ... ತನ್ನೋರು ನನ್ನೋರು ಅಂಬೋರಿಗನ್ನಾ ಇಟ್ಟಂಗಲ್ಲ... ಸುಮ್ನೆ... ರೊಕ್ಕ ರೊಕ್ಕಾಂತ ಗಂಟು ಕಟ್ಟಿಕೊಂಡಿತು, ಮೂಳ!... ಈಗೇನನ್ನಾ ನಿನ್ನಿಂದೆ ಬರ್ತೆತೇನು, ಮೂಳಾ ನಾಡ್ ಮೂಳಾ!" ಎಂದು ಬೈಯುವುದರಲ್ಲಿ ಅವಳ ಸ್ವಭಾವ ಚಿತ್ರಣ ಕಣ್ಣುಕಟ್ಟುತ್ತದೆ.

ಸತ್ತ ಶರಭಮ್ಮಳಿಂದ ಬದುಕಿದ್ದಾಗ 'ಈರಿಗ' ಎನ್ನುವ ವ್ಯಕ್ತಿಗೆ ಕೊಟ್ಟ ಚಿತ್ರಹಿಂಸೆಯನ್ನು ನೆನಪಿಸಿಕೊಳ್ಳುತ್ತಾಳೆ ಈ ಹೆಣ ಕಾಯುತ್ತಿರುವ ಮುದುಕಿ. ಪಾಪ, ಆ ಈರಿಗ ಈ ರಾಕ್ಷಸಿಯ ಕೈಯಲ್ಲಿ ವಿಲಿ ವಿಲಿ ಅಂತ ಒದ್ದಾಡಿದನಮ್ಮಾ. "ಪಾಪ, ಅದ್ಹೆಂಗ ಅಷ್ಟೊಂದು ಬಡ್ಡಿ ಏರ್ತ್ರೋ...! ಮನೇನ ತನ್ನ ಒಡ್ಲಿಗೆ ಹಾಕ್ಕೊಂಡ್ಲು... ಅಗ್ಗೆಯಗಲದ ಭೂಮೀನ ಕೂಡಾ ನುಂಗಿನೀರ್ ಕುಡ್ದುಬಿಟ್ಲು. ಈ ಮಹಮ್ಮಾರಿ! ಈಗ ಆ ಈರಿಗ ಕಂಡ್ ಕಂಡೋರ ಮನಿಯಾಗ ಕೂಲಿ ನಾಲಿ ಮಾಡ್ಕೊಂಡು ಬಿದ್ದಾನಲ್ಲಾ...

ರಾತ್ರಿಯ ಹೊತ್ತಿನಲ್ಲಿ ಈ ಮುದುಕಿಯ ಸ್ವಗತದಲ್ಲಿ ಎದುರುಗಡೆ ಹೆಣ, ಮುಂದುಗಡೆ ಜೀವನದ ಕೊನೆಯಲ್ಲಿರುವ ಮುದುಕಿ ಹೀಗೆ ಕಾಲ ಸರಿಯುತ್ತಿರುವಾಗ... ಅರೆ ಎಚ್ಚರ ಮತ್ತು ಅರೆ ಮಂಪರು ಸ್ಥಿತಿಯಲ್ಲಿದ್ದ ಈ ಮುದುಕಿಗೆ ಮನೆಯ ಮಾಳಿಗೆಯಿಂದ ಮಣ್ಣು ಉದುರುವ ಶಬ್ಧ, ಜೋರಾಗಿ ಗಾಳಿ ಬೀಸುವ ಸದ್ದು ಎಲ್ಲಾ ಕೇಳುತ್ತಾ ಇರುವಾಗ ಹೆಣದ ಸನ್ನಿಧಿಯಲ್ಲಿ ಭಯ ಉಂಟಾಗುತ್ತದೆ.

> **"ಈಟೊಂದು ಐಶ್ವರ್ಯವನ್ನೆಲ್ಲಾ ಇನ್ಮೇಲೆ ಪರರ ಪಾಲಾಗುತ್ತಲ್ಲೇ ಶರಭಮ್ಮಾ... ನಿನ್ ಮೊಮ್ಮಗಳ... ಎಂದು ಗೊಣಗಿಕೊಳ್ಳುತ್ತಾ ಹೆಣದ ತಲೆಯ ಮೇಲೆ ಬಿದ್ದ ಮಣ್ಣನ್ನು ಜಾಡಿಸಬೇಕೆಂದು ಈ ಮುದುಕಿ ಮೊಣಕಾಲುಗಳನ್ನೂರಿ, ಮುಂದುಗಡೆಗೆ ಬಾಗು ಬಾಗುತ್ತಿರುವಂತೆಯೇ ಹಟಾತ್ತನೆ ಕೈಬೀಸಿತು ಹೆಣ ಎರಡೂ ಪಕ್ಕಗಳಲ್ಲಿರುವ ಆ ನೀಲಾಂಜನಗಳಿಗೆ ಆ ಮಂಜಿನ ಹಸ್ತ ತಾಕಿಯೂ ತಾಕದ ತಕ್ಷಣವೇ ಧಡಾರನೆ ಕೆಳಕ್ಕುರುಳಿ ಬಿದ್ದು ಕರಾಳ ಕಂಕಾಳದ ಕಪ್ಪುಕತ್ತಲೆ ಇದ್ದಕ್ಕಿದ್ದಂತೆ, ಬೆಚ್ಚಿಬಿದ್ದು, ಎಚ್ಚರಗೊಂಡು, ಆಕಳಿಸಿ, ಪಿಳಿ ಪಿಳಿ ಕಣ್ಣು ಬಿಟ್ಟಿತು**
>
> **ಈ ಮುದುಕಿ ಗಟ್ಟಿಯಾಗಿ ಒಂದು ಕೇಕೆ ಹಾಕಿದಳಾಗಲೀ ಅದು ಗಂಟಲಿನಿಂದ ಹೊರಬರಲೇ ಇಲ್ಲ.**
>
> **ಹೆಣದ ಹಿಂದೆ, ಅದರ ಬಲಗೈಯ ಹಿಂದೆ, ಸರಿಯಾಗಿ ರಟ್ಟೆಯ ಸ್ಥಳಕ್ಕೆ ಒಂದು ಕೈ ತೂರುವಷ್ಟು ಮಾತ್ರವೇ ಯಾರೋ ಕನ್ನ ಹಾಕಿರುವರೆಂತಲೂ, ಗವಾಕ್ಷಿಯಿಂದಿಳಿದು ಬಂದು ಬಂಗಾರದ ಆಭರಣಗಳನ್ನೆಲ್ಲಾ ಮೂಟೆ ಕಟ್ಟಿಕೊಂಡು ಪರಾರಿಯಾಗಿರುವರೆಂದೂ ಅನಂತರ, ಮೂರ್ಛೆ ತಿಳಿದ ಮೇಲೆಯೇ ಈ ಮುದುಕಿಗೆ ಗೊತ್ತಾಯಿತು."**

ಎಂಬುದಾಗಿ ಕಥೆಯು ಮುಕ್ತಾಯವಾಗುತ್ತದೆ.

ತೊಟ್ಟಿಲಕ್ಷ್ಮಮ್ಮ

ವೀರಭದ್ರ ಅವರ 'ತೊಟ್ಟಿಲಕ್ಷ್ಮಮ್ಮ' ಕಥೆಯು ಕೂಡ ಈ ಭಾಗದ ಪ್ರಾದೇಶಿಕತೆಯನ್ನು ದಟ್ಟವಾಗಿ ಧ್ವನಿಸುವ ಅದರೆಲ್ಲಾ ಮಗ್ಗಲುಗಳನ್ನು ಯಾವುದೇ ವೈಭವೀಕರಣವಿಲ್ಲದೆ ಸರಳವಾಗಿ ಸಹಜವಾಗಿ ನಿರೂಪಿಸುವ ಕಥೆಯಾಗಿದೆ. ಮನುಷ್ಯನ ಜೀವನಕ್ಕಿರುವ ಅರ್ಥ ಸಾಧ್ಯತೆಗಳು, ಗುರಿ, ಉದ್ದೇಶ ಅದರ ನಶ್ವರತೆಯನ್ನು ಕಥಾ ಸಂವಿಧಾನದಲ್ಲಿ ಅಂತರ್ಗತವಾಗಿಸಿದ್ದಾರೆ. ಈ ಕಥೆಗೆ ಪ್ರೇರಣೆ ಲಕ್ಷ್ಮಮ್ಮ ಎಂಬ ಹೆಸರಿನ ಸಂತಳ ಕುರಿತಾದ ಐತಿಹ್ಯವಾಗಿದೆ. ಈ ಕಥೆ ಪ್ರಾರಂಭವಾಗುವುದು ಹೀಗೆ.

"ದೇವರ ಮುಡಿಯ ಮೇಲೆ ಹೂ ಹಾಕುವುದನ್ನಾದರೂ ತಪ್ಪಿಸಿಯಾನು, ಆದರೆ ಪ್ರತಿ ನಿತ್ಯವೂ ಬೆಳಗಿನ ಜಾವ ಐದು ಗಂಟೆಗೇ ತೊಟ್ಟಿ ಲಕ್ಷ್ಮಮ್ಮನ ದೇವಾಲಯಕ್ಕೆ ಬರುವುದನ್ನು ಮಾತ್ರ ತಪ್ಪಿಸುವುದಿಲ್ಲ. ಆಲಯದ ಅಂಗಳಕ್ಕೆದುರಾಗಿರುವ ಜಗುಲಿಯ ಮೇಲೆ –

> ಮೊಣಕಾಲುಗಳನ್ನು ಕೈಗಳಿಂದ ಬಂಧಿಸಿ ಕುಳಿತ ಭಂಗಿಯಲ್ಲಿಯೇ ಎಂಟು ಗಂಟೆಯ ತನಕ ಕುಳಿತು, ದೇವಾಲಯದ ಮಹಾದ್ವಾರಬಂಧವನ್ನೋ, ಅಥವಾ ನೀಲಾಕಾಶದ ಮಹಾಬಯಲನ್ನೋ - ಏಕ ಚಿತ್ತದಿಂದ, ತದೇಕ ದೃಷ್ಟಿಯಿಂದ ನೋಡುತ್ತಾ, ಆಗಿ ಹೋದ ಒಂದು ಜೀವವನ್ನು ಬಗೆಗಣ್ಣುಗಳಿದುರು ಕಾಣುತ್ತ ಪರಧ್ಯಾನದಿಂದ ಹಾಗೆಯೇ ಕಲ್ಲಿನ ಗೊಂಬೆಯಂತೆ ಕುಳಿತು- 'ಕಬ್ಬಿಣದ ಪೆಟ್ಟಿಗೆಯಲ್ಲಿ ಬೀಗದ ಕೈಯಿರಿಸಿ, ಬೀಗ ಹಾಕಿದ್ದೇನೆ. ಬುದ್ಧಿವಂತನಾದರೆ, ಆ ಬೀಗದ ಕೈಯನ್ನು ತೆಗೆದುಕೋ' - ಎಂದು, ಆ ಆಗಿಹೋಗಿದ್ದ ಜೀವ, ಎಂದೋ ಒಂದು ದಿನ ಹೇಳಿದ್ದ ಆ ಮಾತನ್ನೇ ಮೆಲುಕು ಹಾಕುತ್ತ, ಆ ಮಾತಿನ ಅಂತರಂಗವನ್ನು ಬೆದಕುತ್ತ – ಎಪ್ಪತ್ತೇಳರ ಮುದಕ ಮುನಿರಾಮ್ ಸಿಂಗ್ ಹಾಗೆ ಕುಳಿತಿರುವುದನ್ನು ಇಂದಿಗೂ ನೋಡಬಹುದು; ಯಾರೂ ನೋಡಬಹುದು."

ಎಂದು ಆರಂಭವಾಗುವ ಕಥೆ ಬದುಕಿಗಿರುವ ಅರ್ಥ ಪರಮಾರ್ಥಗಳ ಕುರಿತು ಸಾಂಕೇತಿಕವಾಗಿ ಲಕ್ಷ್ಮಮ್ಮ ಹೇಳಿದ್ದ 'ಕಬ್ಬಿಣದ ಪೆಟ್ಟಿಗೆಯಲ್ಲಿ ಬೀಗದ ಕೈಯಿರಿಸಿ, ಬೀಗ ಹಾಕಿದ್ದೇನೆ. ಬುದ್ಧಿವಂತನಾದರೆ, ಆ ಬೀಗದ ಕೈಯನ್ನು ತೆಗೆದುಕೋ' ಎನ್ನುವ ಮಾತುಗಳನ್ನು ಎಪ್ಪತ್ತೇಳರ ಮುನಿರಾಮ್ ಸಿಂಗ್ ನೆನಪಿಸಿಕೊಳ್ಳುವ ಸನ್ನಿವೇಶದಿಂದ ಕಥೆ ಬಿಚ್ಚಿಕೊಳ್ಳುತ್ತಾ ಸಾಗುತ್ತದೆ.

ಅಲ್ಲದೆ ಈ ಕಥೆಯ ಶೈಲಿ ಕಾವ್ಯಾತ್ಮಕವಾಗಿದ್ದು, ದಟ್ಟ ಪ್ರಾದೇಶಿಕ ವಿವರಗಳನ್ನು ಒಳಗೊಂಡಿದ್ದರೂ ಸಂವಹನಶೀಲತೆಗೆ ಅಡ್ಡಿಯಾಗದಿರುವುದು ಇದರ ವೈಶಿಷ್ಟ್ಯವಾಗಿದೆ. ಉದಾಹರಣೆಗೆ ಈ ಕೆಳಗಿನ ಉಧೃತ ಭಾಗವನ್ನು ಗಮನಿಸಬಹುದು.

> "ಇರುಳೆಲ್ಲಾ ಹೆಪ್ಪುಗಟ್ಟಿದ ಕತ್ತಲ ಮೊತ್ತ ನಿಧಾನವಾಗಿ ಕರಗುತ್ತಿದೆ. ಪೂರ್ವ ದಿಕ್ಕಿನಲ್ಲಿ ಮಸುಕು ಮಸುಕಾಗುತ್ತಿದೆ. ಗಾಳಿ, ಒಮ್ಮೆ ರೊಂಯ್ಯೋ ಎಂದು ಬೀಸಿತು. ಸದ್ದಿಲ್ಲದ ರಾತ್ರಿಯನ್ನು ಕಲಕುವ ಹಲವಾರು ಕ್ರಿಮಿಕೀಟಗಳ ಪ್ರಯತ್ನ ಸಾಗುತ್ತಿರುವಂತೆಯೇ, ಕತ್ತಲೆಗೇ ಧ್ವನಿ ಮೂಡಿದಂತೆ – ಎಲ್ಲಿಂದಲೋ ಜೋಗುಳದ ಹಾಡು ಇಂಪಾಗಿ, ಕೇಳುವವರ ಬಗೆ ತಂಪಾಗುವಂತೆ ತೇಲಿ ತೇಲಿ ಬರುತ್ತಿದೆ –
>
> ಜೊಳ್ಳೊಳ್ಳೊ ಆಯೀ,
>
> ಅಳಬೇಡ ಅಳಬೇಡ ನನ ಕಂದಯ್ಯಾ,
>
> ಅಳಬೇಡ ಅಳಬೇಡ ನನ ಕಂದಯ್ಯಾ
>
> ಜೋಗುಳ ಮಾತ್ರ ಕೇಳಿಸುತ್ತಿದೆ. ಆದರೆ ಕೈಕೂಸು ಅಳುವ ಸದ್ದೇ ಇಲ್ಲ!

ದೂರದಿಂದ ಕೇಳಿಸುತ್ತಿದ್ದ ಲಾಲಿ ಬರುಬರುತ್ತ ನಗರದ ಬೀದಿಯ ಅಂಚಿನಿಂದ ಕೇಳಿಬರಲಾರಂಭಿಸಿತು –

ಕೂಸನ್ನು ಎದೆಗಪ್ಪಿಕೊಂಡು, ಸೆರಗನ್ನು ಗಾಳಿಗೆ ಹಾರಲು ಬಿಟ್ಟು, ಮುಂಗುರುಳನ್ನು ಹಣೆಯ ಮೇಲೆ ಲಾಸ್ಯವಾಡಲು ತೊರೆದು, ನಿಧಾನವಾಗಿ ಹೆಜ್ಜೆಯ ಮೇಲೆ ಹೆಜ್ಜೆಯನ್ನಿಕ್ಕುತ್ತ, ಎಳೆ ಎಳೆಯಾಗಿ ಜೋಗುಳವನ್ನು ಎಳೆದೆಳೆದು ರಾಗವಾಗಿ, ಇಂಪಾಗಿ ಹಾಡುತ್ತಾ, ಒಮ್ಮೊಮ್ಮೆ ತಟಕ್ಕನೆ ಹಾಡುವುದನ್ನು ನಿಲ್ಲಿಸಿ - 'ಅಯ್ಯೋ, ಕೂಸಿಗೆ ಚಳಿಯಾಗ್ತದಲ್ಲೇ' - ಎಂದು ತಟ್ಟನೆ ಸೆರಗನ್ನು ಆ ಕೂಸಿಗೆ, ಅಲುಗಾಡದ - ಮಿಸುಕಾಡದ - ಚಲಿಸದ ಅಳದೇ ಇರುವ - ಆ ಕೂಸಿನ ಮೈತುಂಬ ಹೊದೆಸುತ್ತ ಅದನ್ನು ಇನ್ನೂ ಬಲವಾಗಿ, ತುಂಬಿ ಬರುತ್ತಿರುವ ಎದೆಗಳಿಗೆ ಒತ್ತಿಕೊಂಡು, ಹೆಜ್ಜೆಯ ಮೇಲೆ ಹೆಜ್ಜೆಯನ್ನಿಕ್ಕುತ್ತ, ಇರುವೆಯಂತೆ ನಡೆದು ಬಂದಳು ಲಕ್ಷ್ಮಕ್ಕ.

ಪೂರ್ವದ ದಿಕ್ಕು ಕಿಸಕ್ಕನೆ ನಕ್ಕಂತಾಯಿತು.

ಕಪ್ಪಾದ ಮೇಲ್ಮುಸುಗನ್ನು ಧರಿಸಿದ ಸುಂದರಿಯೋರ್ವಳು ನಕ್ಕಾಗ, ಆ ಕರಿಯ ಮುಸುಗಿನೊಳಗಡೆ ಬೆಳಗುವ ಶುಭ್ರರದನಪಂಕ್ತಿಯಂತೆ - ಪೂರ್ವ ದಿಕ್ಕಿನಲ್ಲಿ ಮಾತ್ರ ಬೆಳ್ಳ ಬೆಳ್ಳಗೆ ಬೆಳ್ಳಿ ಬೆಳಕು ಕಿಸಕ್ಕನೆ ನಕ್ಕಂತಾಯಿತು - ಆ ಲಕ್ಷ್ಮಕ್ಕನ ಮೂರ್ಖತೆಯನ್ನು ಕಂಡು!

ಗಾಳಿ ರೊಂಯ್$_{sss}$... ಎಂದಿತು.

ಕಾಗೆಗಳೂ ಸಹ, ಲಕ್ಷ್ಮಕ್ಕನ ಅವಿವೇಕತನವನ್ನು, ಮಮತಾತಿರೇಕವನ್ನು ಕಂಡು ಧಿಕ್ಕರಿಸಿದಂತೆ 'ಕವ ಕವನೆ' ಕೂಗುತ್ತ, ಬೆಳಕಿನಿಂದ ಒದ್ದೆಯಾಗುತ್ತಿರುವ ಆಕಾಶದ ಬಯಲಿನಲ್ಲಿ ಹಾರಾಡತೊಡಗಿದವು!

ಆದರೂ -

- ಲಕ್ಷ್ಮಕ್ಕ ಹಾಡದೇ ಇರಲಿಲ್ಲ.

- ಚಲನೆಯಿಲ್ಲದ ಕೈಕೂಸನ್ನು ಬಿಗಿಯಾಗಿ ಅಪ್ಪಿಕೊಳ್ಳದೇ ಬಿಡಲಿಲ್ಲ.

ಕೂಸು ಅಳುತ್ತಿಲ್ಲ. ಆದರೆ ಲಕ್ಷ್ಮಕ್ಕ ಜೋಗುಳದ ಹಾಡನ್ನು ನಿಲ್ಲಿಸುತ್ತಿಲ್ಲ.

ಕೂಸು ಮಿಸುಕಾಡುತ್ತಿಲ್ಲ. ಆದರೆ ಲಕ್ಷ್ಮಕ್ಕ ಅದನ್ನು ಎದೆಗಳಿಗೆ ಅಪ್ಪಿಕೊಳ್ಳುವುದನ್ನು ಬಿಡುತ್ತಿಲ್ಲ. ಪಕಪಕನೆ ನಕ್ಕಂತೆ - ಪೂರ್ವ ದಿಕ್ಕು ಬೆಳ್ಳಂಬೆಳಕಾಗಿಬಿಟ್ಟಿತ್ತು-

ಕಥೆಯ ಕಾವ್ಯಾತ್ಮಕತೆಯನ್ನು ಗಮನಿಸುವುದರೊಂದಿಗೆ ಕಥೆಯ ಓಟದ ಕಡೆಗೆ ಕಣ್ಣಾಡಿಸಬಹುದು. ಹಿಗೆ ಲಕ್ಷ್ಮಕ್ಕ ಹುಚ್ಚಳಾಗಿ, ಒಬ್ಬಂಟಿಗಳಾಗಿ ಜೀವವಿಲ್ಲದ ಕೂಸನ್ನೆತ್ತಿಕೊಂಡು ಕಂಡ ಕಂಡವರ ಅಂಗಳದಲ್ಲಿ ನಿಂತು ಮನೆಯೊಳಗೆ ಇಣುಕಿ ತೂಗು ತೊಟ್ಟಿಲ ಕಡೆಗೆ ನೋಡುತ್ತಾ 'ನೆಲೆಯಿಲ್ಲದ ನಾಯಿಯಂತೆ ಸುತ್ತಾಡಲಾರಂಭಿಸಿದಳು.' ಅಂಗಳದಲ್ಲಿ ಚಿಕ್ಕ ಮಕ್ಕಳಿದ್ದರೆ, ಓಡಿ ಹೋಗಿ ಅಪ್ಪಿಕೊಂಡು, ಆ ಕೂಸಿನ ಮುಖದ ತುಂಬೆಲ್ಲಾ ಲೊಚಲೊಚನೆ ಮುತ್ತಿಡುವಳು. ಆ ಮಗುವಿನ ತಾಯಿ ಅದನ್ನು ಕಂಡು- 'ಛಿ ಹುಚ್ಚಿ ತೊಲಗು ತೊಲಗೇ' ಎಂದಬ್ಬರಿಸಿ ಗದರುತ್ತಿದ್ದುದುಂಟು. ಆಗ, ಲಕ್ಷ್ಮಕ್ಕ ಮುಖ ಸಪ್ಪಗೆ ಮಾಡಿಕೊಂಡು, ಕಣ್ಣು ತುಂಬ ನೀರು ತಂದುಕೊಂಡು, ಕಾಲೆಳೆದುಕೊಳ್ಳುತ್ತ, ತಿರುಗು ಮುಖ ಮಾಡಿಕೊಂಡು ಹೊರಟು ಹೋಗುತ್ತಿದ್ದಳು. ಅದು ಹೇಗೋ ಸರ್ಕಾರಿ ತಳವಾರನ ಸಹಾಯದಿಂದ ಅವಳ ಹತ್ತಿರವಿರುವ ಜೀವವಿಲ್ಲದ ಕೂಸನ್ನು ತೆಗೆದುಕೊಂಡು ಮಣ್ಣು ಮಾಡಿದ್ದರು.

ಆವತ್ತಿನಿಂದ ಹಾದಿಯಲ್ಲಿ ಸರಕಾರಿ ತಳವಾರನನ್ನು ಕಂಡೊಡನೇ 'ಎಲೋ ನನಬಟ್ಟೆ ನನ್ ಕೂಸ್ನ ಕೊಡ್ತಿಯೋ, ಇಲ್ಲವೋ' ಎಂದು ರಿವ್ವನೆ ಕಲ್ಲೊಗೆಯುತ್ತಿದ್ದಳು. 'ಆ ಹೊತ್ತು ಕೂಸ್ನ ಕೈಯಿಂದ ಕಿತ್ಕೊಂಡು ಹೋಗಿ ಏನು ಮಾಡ್ಬಿಯೆಲೋ ಭಾಡ್‌ಖಾವ್' ಎನ್ನುತ್ತಿದ್ದಳು. ಲಕ್ಷ್ಮಮ್ಮ ಮೊದಲನೆಯ ಕೂಸು ಹುಟ್ಟುವಾಗಲೇ ಮೈಮೇಲಿನ ಪರಿವೆ ಇಲ್ಲದ ಹುಚ್ಚಿಯಾಗಿದ್ದಳು. ಕಥೆಯಲ್ಲಿ ಈ ಕುರಿತು ಬರುವ ಸಂಭಾಷಣೆಯ ವಿವರ ಇಂತಿದೆ. 'ಅಯ್ಯೋ ಪಾಪ ಕೂಸೂ... ಕೂಸಂತ ಎಷ್ಟೊಂದು ಒದ್ದಾಡಿತು! ಹುಂ ಹುಚ್ಚದು... ಮೊದಲನೆ ಕೂಸು ಹುಟ್ಟುವಾಗ ಗ್ಯಾನವೇ ಇರಲಿಲ್ಲ- ಅದನ್ನೆತ್ಕೋ ಬೇಕು; ಮೊಲೆಯುಣಿಸಬೇಕು ಅಂಬೋ ತಿಳಿವಳಿಕೇನೇ ಇಲ್ದೆ, ಅದನ್ನು ಹಡೆದಲ್ಲಿಯೇ ಬಿಟ್ಟು ಬಂತು ಮೂಳ! ಯಾವನಿಗೆ ಹಡಕೊಂಡ್ಲೋ ಏನೋ...! ... ಮತ್ತೆ ಎರಡನೇ ಸಾರಿ ಬಸುರಿ... ಮತ್ತಾವನೋ ಏನೋ ಶನ್ಯೇಸಿ! ಎರಡನೇ ಕೂಸು ಹುಟ್ಟಿದ್ಮೇಲೆ ಸತ್ತು ಹುಟ್ಟಿದ ಕೂಸ್ನೇ ಎದೆಗೆತ್ತಿಕೊಂಡು ಹೆಂಗ್ ತಿರುಗಿತೂ ಅಂತ ಹುಚ್ಚದು, ಪಾಪ ಏನು ಕರ್ಮ ಮಾಡಿತ್ತೋ ಹೋದ ಜಲ್ಮದಾಗ..." ಇಂತಹ ಲಕ್ಷ್ಮಕ್ಕ ಅರೆ ಹುಚ್ಚಿಯಾದರೂ ಬದುಕಿನ ಅಸಂಗತತೆಗಳನ್ನು, ಐಹಿಕ ಜಗತ್ತಿನ ಒಣ ಆಡಂಬರಗಳನ್ನು ಸುತ್ತಣ ಪ್ರಪಂಚಕ್ಕೆ ತನ್ನ ನಡವಳಿಕೆಗಳಿಂದ ತೋರಿಸಿಕೊಡುತ್ತ ಸಂತಳಾಗುತ್ತಾಳೆ.

ಅವಳಿಗೆ ಆಶ್ರಯ ನೀಡಿದ್ದ ಊರ ಹೊರಗಿನ ತೊಟ್ಟಿಯೊಂದರಿಂದಾಗಿ ಅವಳಿಗೆ 'ತೊಟ್ಟಿ ಲಕ್ಷ್ಮಮ್ಮ' ಎಂಬ ಹೆಸರು ಬಂದಿತ್ತು. ಹದಿನೈದು ವರ್ಷಗಳ ಕಾಲ ಅದು ಆಕೆಗೆ ಆಶ್ರಯ ನೀಡಿತ್ತು. ಇಂತಹ ಲಕ್ಷ್ಮಮ್ಮನಿಗೆ ಮುನಿರಾಮ್ ಸಿಂಗ್ ಶಿಷ್ಯನಾದದ್ದು ಮಾತ್ರ ವಿಚಿತ್ರವಾಗಿದೆ. ಬಾಲಕನಾಗಿದ್ದ ಮುನಿರಾಮ್ ಸಿಂಗ್ ಲಕ್ಷ್ಮಮ್ಮನಿಗೆ ಕಲ್ಲಿನಿಂದ ಹಣೆಗೆ ಹೊಡೆದಿರುತ್ತಾನೆ. ಆ ಹೊಡೆತದಿಂದ 'ಚಿಲಿಲಿಲಿ' ಎಂದು ಚಿಮ್ಮಿ ಹರಿದಾಗ ಮಾತ್ರವೇ ಲಕ್ಷ್ಮಕ್ಕ

"ಎಲೋ... ನಿನ್ನನ್ನು ಕಡೇವರ್ಗೂ ಬಿಡೋದಿಲ್ಲಲ್ಲೋ..."

- ಎಂದು ಕಿರುಚಿದಳು. ಅಷ್ಟೇ...

ಆ ದಿನ ರಾತ್ರಿಯೇ ಆ ತುಂಟ ಹುಡಗನ ಕನಸಿನಲ್ಲಿ -

.... ಗವಿಯಲ್ಲಿನ ಗಂಭೀರವಾದ ಕತ್ತಲಿನ ಹಾಗೆ ಸುತ್ತಲೂ ಬಲೆಯಾಗಿ ಹರಡಿದ ಕತ್ತಲು. ಅಲ್ಲಿ ಅದಾರೋ ಆ ಹುಡುಗನನ್ನು ಬಿಟ್ಟು ಹೋಗಿದ್ದಾರೆ. ಆ ತುಂಟಪೋರ ಭಯದಿಂದ ನಡುಗುತ್ತಿದ್ದಾನೆ. ಚಳಿಗೆ ಸಿಕ್ಕ ನಾಯಿಯ ಕುನ್ನಿಯಂತೆ... ಇದ್ದಕ್ಕಿದ್ದಂತೆ, ಆ ಕತ್ತಲ ಗರ್ಭದಿಂದೆದ್ದು, ಅದಾರೋ, ಏನೋ, ಮೆಲ್ಲಗೆ ಎದ್ದು - ದಪ್, ದಪ್ ಎಂದು ಹೆಜ್ಜೆ ಹಾಕುತ್ತಾ, ಕೈಗಳೆರಡನ್ನೂ ಮುಂದಕ್ಕೆ ಚಾಚಿ, ಕುತ್ತಿಗೆಯ ಕಡೆಗೆ ಬೆರಳುಗಳನ್ನಗಲಿಸಿ, ಬೆತ್ತಲೆಯಾಗಿ, ಭೂತದಂತೆ ಕಪ್ಪು ಕೂದಲನ್ನು ಹರಡಿಕೊಂಡು, ಧಿಗ್ - ಧಿಗ್ ಎಂದು ನಡೆಯುತ್ತ ಬಂದಂತೆ... ಹುಡುಗ ತೊಪ್ಪನೆ ಬೆವತು, ತಟ್ಟನೆ ಚೀರಿತು. ಆದರೆ, ಅಗಲಿಸಿದ ಬೆರಳುಗಳನ್ನುಳ್ಳ ಆ ಕೈಗಳೆರಡೂ ಕತ್ತನ್ನಪ್ಪಿದುವು... ಕೂಡಲೇ, ಅದೇನಾಯಿತೋ ಏನೋ, ಹಾಗೆ ಕಿರುಚಿದ ಹುಡುಗನೇ, ತಟಕ್ಕನೆ ಮೇಲೆದ್ದು - ಆ ವ್ಯಕ್ತಿಯನ್ನು ದೂಡಿ, ಕೆಳಗುರುಳಿಸಿ, ಎದೆಯ ಮೇಲೆ ಕುಳಿತು, ಅದರ ಕತ್ತನ್ನು ಹಿಚುಕುತ್ತಿರುವಂತೆ - ಕೂಡಲೆ ಬೆಳಕು ಫಳಕ್ಕನೆ ಮೂಡಲಾಗಿ, ನೋಡಿದರೆ - ಅದೇ ಲಕ್ಷ್ಮಕ್ಕನ ಕಳೇ ಬರ...!

ಆದರೇನು!

"ಎಲೋ... ನಿನ್ನನ್ನು ಕಡೇವರ್ಗೂ ಬಿಡೋದಿಲ್ಲಲೋ..."

- ಎಂದ ಲಕ್ಷ್ಮಕ್ಕ ಕಡೆಯವರೆವಿಗೂ ಬಿಡಲೇ ಇಲ್ಲ!

ಸರಿ ಸುಮಾರು ಹನ್ನೆರಡು ವರ್ಷಗಳ ತನಕ, ಆ ತುಂಟ ಹುಡುಗ ಇಪ್ಪತ್ತೇಳರ ಯುವಕನಾಗುವವರೆಗೆ, ಲಕ್ಷ್ಮಕ್ಕ ಬಿಡಲೇ ಇಲ್ಲ!!

ಹಾಗೆಯೇ, ಇರುಳಲ್ಲಿ, ಕನಸಿನಲ್ಲಿ ಕಾಣಿಸಿಕೊಳ್ಳುತ್ತಲೇ ಇದ್ದಳು ಹನ್ನೆರಡು ವರ್ಷಗಳವರೆಗೆ, ಆಗಾಗ್ಗೆ ಆ ತುಂಟ ಹುಡುಗ, ಕೊನೆಗೆ, ಇಪ್ಪತ್ತೇಳರ ವಯಸ್ಸಿನಲ್ಲಿ ಓ, ಆತನೇ ಮುನಿರಾಮ್‌ಸಿಂಗ್.

ಚೌದರಿ ಬಸವಲಿಂಗಪ್ಪ, ವಡ್ಡರ ಭೋಜಪ್ಪ, ಸಾಧುತಿಪ್ಪಣ್ಣ, ಮುಸಳೆ ಪಾಂಡುರಂಗಪ್ಪಾದಿ ಭಕ್ತರು ಆ ತೊಟ್ಟಿಗೆ ಅಮಾವಾಸ್ಯೆಯ ದಿನ ಮಧ್ಯ ರಾತ್ರಿಯಲ್ಲಿ ಒಬ್ಬೊಬ್ಬರಾಗಿ ಬಂದು, ಲಕ್ಷ್ಮಕ್ಕನ ಸುತ್ತ ಕುಳಿತುಕೊಳ್ಳುತ್ತಿದ್ದರು. ಲಕ್ಷ್ಮಮ್ಮ, ಆ ಕಾಲಕ್ಕಾಗಲೇ, ಹುಣ್ಣಿಮೆಅಮಾವಾಸ್ಯೆಯ ದಿನಗಳಂದು ಕಟುಕರ ಅಂಗಡಿಯ ಹಿಂಬದಿಯ ಬಯಲಿಗೆ ಹೋಗಿ ಬರುವುದನ್ನು ನಿಲ್ಲಿಸಿದ್ದಳು. ಇವರೆಲ್ಲರನ್ನು ಲಕ್ಷ್ಮಮ್ಮ ಬಾಯಿಗೆ ಬಂದಂತೆ ಗದರುತ್ತಿದ್ದಳು. ವಾಚಾಮಗೋಚರವಾಗಿ ಬಯ್ಯುತ್ತಿದ್ದಳಾದರೂ ಇವರು ಬಂದು ಹೋಗುವುದು ಮಾತ್ರ ನಿಲ್ಲಲಿಲ್ಲ. ಏನು ಕೇಳುತ್ತಿದ್ದರೋ, ಏನು ಮಾಡುತ್ತಿದ್ದರೋ ಏನೋ ಯಾರಿಗೂ ತಿಳಿಯದು. ಆದರೆ, ಆಗೊಮ್ಮೆ, ಈಗೊಮ್ಮೆ ಈ ಮಾತುಗಳನ್ನು ಕೇಳಿದವರು ಹೇಳುವುದುಂಟು-

ಎಲೋ ತಿರಬೋಕಿ ಹುಡುಗು ಮುಂಡೇವೆ ನಂತಲ್ಲೇನೈತೋ ಮಣ್ಣು ಮುಕ್ತಿ ಅಂತೆ ಮುಕ್ತಿ, ಹೋಗ್ತೀರಾ ಇಲ್ಲಾ...

ಇವರು ವರ್ಷಕ್ಕೊಮ್ಮೆ ಲಕ್ಷ್ಮಮ್ಮನಿಗೆ, ಅಲ್ಲ, ಆಕೆಯ ದೇಹಕ್ಕೆ ಹೊಸ ಸೀರೆಯನ್ನು ಸುತ್ತಿ ಮೈಗೆ ಕುಪ್ಪಸವನ್ನು ತೊಡಿಸಿ, ಕೈಗೆ ಬೆಳ್ಳಿಯ ಕಡಗಗಳನ್ನಿರಿಸಿ, ಕಾಲಿಗೆ ನಮಸ್ಕರಿಸಿ ಹೋಗುತ್ತಿದ್ದರು. ಆದರೆ ಅವುಗಳು ಮಾರನೇ ದಿನ ತೊಟ್ಟಿ ಬಳಿಯಲು ಬಂದ ಜಲಗಾರನ ಪಾಲಾಗಿ ಬಿಡುತ್ತಿದ್ದವು. ಆಕಸ್ಮಾತ್ತಾಗಿ ಅವನು ತೆಗೆದುಕೊಂಡು ಹೋಗದಿದ್ದರೆ ಲಕ್ಷ್ಮಮ್ಮ ಎರಡು ದಿನಗಳೋ, ಮೂರು ದಿನಗಳೋ ಆದನಂತರ, ಮುಂಗೈಗಳನ್ನು ನೋಡಿ ದಿಟ್ಟಿಸಿ ನೋಡಿ ಅನ್ನುತ್ತಿದ್ದಳು

ಛೀ ಛೀ ಏನಿವು ಬಿಳೀ ಹಾವುಗಳು

ಬೆಳ್ಳಿಯ ಕಡಗಗಳನ್ನು ಕಿತ್ತೆಸೆಯುತ್ತಿದ್ದಳು.

ಮೈಮೇಲಿನ ಬಟ್ಟೆಗಳನ್ನು ನೋಡಿ

ಏನಿದು ಮೋಡ

ಬಟ್ಟೆಗಳನ್ನು ಹರಿದು ಬಿಸಾಡುತ್ತಿದ್ದಳು.

ಇಂತಹ ಲಕ್ಷ್ಮಮ್ಮ ತನ್ನ ನಿಗೂಢವಾದ ನಡವಳಿಕೆಗಳಿಂದ ಸಾಂಕೇತಿಕವಾಗಿ ಬದುಕಿನ ನಿಜದ ಅರ್ಥವನ್ನು ಧ್ವನಿಸುತ್ತಿದ್ದಳು. ಆಕೆ ಕೊಡುವ ನಿರ್ಣಯಗಳನ್ನು ತಮಗೆ ಅನುಕೂಲವಾಗುವಂತೆ ಅರ್ಥೈಸಿಕೊಳ್ಳುವವರೂ ಇದ್ದರು. ಹೀಗೆ ಲಕ್ಷ್ಮಮ್ಮ ತನ್ನ ವರ್ತನೆಗಳಿಂದ ಅಪೂರ್ವ ಶಕ್ತಿಯಿರುವ ದೇವತೆಯಾಗಿ ಮಾರ್ಪಟ್ಟಳು. ಆಕೆ ಹೇಳಿದ ಮಾತುಗಳು ಹುಸಿಯಾಗುತ್ತಿರಲಿಲ್ಲ. ಬದುಕು ಕಲಿಸಿಕೊಟ್ಟ ಅನುಭವ ಮಾತ್ರವಲ್ಲದೆ ಅವಳ ಗ್ರಹಿಕೆಗಳಿಗೆ ನಿಲುಕುತ್ತಿದ್ದ, ಭವಿಷ್ಯತ್, ವರ್ತಮಾನಗಳ ಆಗುಹೋಗುಗಳನ್ನು ಅರ್ಥೈಸುವ ಅವಳ ಸಾಮರ್ಥ್ಯದಿಂದ ಜನಪ್ರಿಯಳಾದಳು. ಈ ಸೀಮೆಯ ಜನ ವಶೀಕರಣಕ್ಕೊಳಗಾದವರಂತೆ ಅವಳ ನಡೆ ನುಡಿಗಳಿಗೆ ವಿಶಿಷ್ಟ ಅರ್ಥಗಳನ್ನು ಹಚ್ಚಿದರು ಅಥವಾ ಕಂಡುಕೊಂಡರೆಂದು ಹೇಳಬಹುದು.

ಹತ್ತೊಂಬತ್ತನೆಯ ಶತಮಾನದ ಆರಂಭದಲ್ಲಿ ಬದುಕಿದ್ದ ಲಕ್ಷ್ಮಮ್ಮನ ಕಥೆ ಜನಪದರ ನೆನಪುಗಳಿಂದ ಹೆಕ್ಕಿ ಕಟ್ಟಿದ ಕಥೆಯಾಗಿದೆ. ಇಂತಹ ಕಥೆಯೊಂದು ಕೇವಲ ಸಂಗ್ರಹಿಸಿದ ಮಾಹಿತಿಗಳಿಂದ ಒಣ ವರದಿಯಾಗುವ ಅಪಾಯವಿದೆ. ಆದರೆ ವೀರಭದ್ರ ಅವರ ಪ್ರತಿಭೆಯಿಂದಾಗಿ ಇದೊಂದು ಕಲಾಕೃತಿಯಾಗಿ ಅರಳಿದೆ. ಒಬ್ಬ

ಸೃಜನಶೀಲ ಲೇಖಕನೊಬ್ಬ ಇಂತಹ ಜನಪದರ ಆಶಯಗಳನ್ನು ಅರ್ಥೈಸಲು ಕಥಾ ಮಾಧ್ಯಮವನ್ನು ಬಳಸಿಕೊಂಡುದುದು ಅರ್ಥಪೂರ್ಣವಾದುದಷ್ಟೇ ಅಲ್ಲ ಸ್ತುತ್ಯಾರ್ಹವೆನ್ನಬಹುದು. ಈ ಕಥೇ ಸಂವಹನ ಶೀಲತೆಯಲ್ಲಿ ನಾಡಿನ ಕನ್ನಡ ಬಲ್ಲ ಯಾರನ್ನಾದರೂ ತಲುಪಬಲ್ಲದು. ಈಗ ಆಂಧ್ರ ಪ್ರದೇಶದಲ್ಲಿರುವ, ಹೆಚ್ಚಾಗಿ ಕನ್ನಡಿಗರಿರುವ, ಏಕೀಕರಣಕ್ಕಿಂತ ಮುಂಚಿನ ಬಳ್ಳಾರಿ ಜಿಲ್ಲೆಯ ಒಂದು ಭಾಗವಾಗಿದ್ದ ಆದವಾನಿಯ ಸುತ್ತಮುತ್ತಲಿನ ಕನ್ನಡದ ನುಡಿಗಟ್ಟುಗಳನ್ನು, ಭಾಷಿಕ ವೈಶಿಷ್ಟ್ಯತೆಯನ್ನು ಸೊಗಸಾಗಿ ಅಭಿವ್ಯಕ್ತಿಸಿದ್ದಾರೆ.

**ಕರಿವೀರಪ್ಪನ ಗುಟ್ಟೆ**

ವೀರಭದ್ರ ಅವರ ಕರಿವೀರಪ್ಪನ ಗುಟ್ಟೆ ಕಥೆ ಕೂಡ ಅಪ್ಪಟ ಪ್ರಾದೇಶಿಕ ನೆಲೆಯಲ್ಲಿ ಮೈದಾಳಿದ ಕಥೆಯಾಗಿದೆ. ಕಥೆಯ ವಸ್ತು ಜನಪದೀಯವಾದದ್ದು. ಗ್ರಾಮದೇವತೆಯ ಉತ್ಸವದ ಸಮಯದಂದು ಪರ ಊರಿನವರು ದೇವತೆಯ 'ಕರಿ'ಯನ್ನು ತಮ್ಮ ಊರಿಗೆ ಕದ್ದೊಯ್ದರೆ 'ಹುಲುಸು' ಅರ್ಥಾತ್ ಸಮೃದ್ಧಿಯೆಲ್ಲಾ ಕದ್ದೊಯ್ದ ಊರಿಗೆ ದೊರೆಯುತ್ತದೆ. ಹಾಗೆ ದೇವತೆಯ 'ಹುಲುಸು' ಅಥವಾ 'ಕರಿ' ತಂದ ಊರಿಗೆ ಯಾವುದೇ ಕೊರತೆಯಿರುವುದಿಲ್ಲ. ಇಂತಹ ಗ್ರಾಮದೇವತೆಯ ಹಬ್ಬದಲ್ಲಿ ಈ 'ಕರಿ'ಯನ್ನು ಸರ್ಪಗಾವಲಿನಿಂದ ಕಾಯಲಾಗುತ್ತಿರುತ್ತದೆ. ಯಾರೂ ಆ ಕರಿಯನ್ನು ಕದ್ದೊಯ್ಯುವ ಸಾಹಸವನ್ನು ಯಾರೂ ಮಾಡಲಾರರು. ಒಂದು ವೇಳೆ ಹಾಗೆ ಮಾಡಿದಲ್ಲಿ ದೇವತೆಯ ಕೋಣದಂತೆಯೇ ಅವನನ್ನು ಕೊಚ್ಚಿ ರಕ್ತ ಚೆಲ್ಲಾಡಿ ಹುಲುಸು ಊರಲ್ಲಿಯೇ ಉಳಿಯುವಂತೆ ಮಾಡಲಾಗುತ್ತದೆ. ಈ ಸಂಗತಿಯು ಕೇವಲ ಕಪೋಲಕಲ್ಪಿತವಾಗಿರದೆ ಸತ್ಯ ಸಂಗತಿಯೂ ಆಗಿದೆ. ಹಿಂದೆಲ್ಲಾ ಈ ಭಾಗದಲ್ಲಿ ಇಂತಹ ಘಟನೆಗಳು ಸಾಕಷ್ಟು ನಡೆದಿವೆ. ಅಲ್ಲದೆ ಈ ಕಥೆಯಲ್ಲಿಯೂ ಕೂಡ ಲೇಖಕರು ಅಂತಹ ಹುಲುಸು ತಂದ ವೀರನ ವೀರಮಣದ ಕುರುಹಾಗಿ ಅವನಿಗೆ ಕಟ್ಟಿದ ಸಮಾಧಿ ಸ್ಥಳವನ್ನು ಕುರಿತು ಕಥೆಯಲ್ಲಿ ವಿವರಿಸುತ್ತಾರೆ. 'ಕರಿವೀರಪ್ಪನ ಗುಟ್ಟೆ' ಎನ್ನುವ ಕಥೆಯ ಶೀರ್ಷಿಕೆಯೇ ಆ ವೀರನ ಸಮಾಧಿ ಸೂಚಕವಾಗಿದೆ. ಕಥೆ ಆರಂಭವಾಗುವುದು ಕೂಡ 'ಕರಿವೀರಪ್ಪನ ಗುಟ್ಟೆ' (ಅಂದರೆ ಸಮಾಧಿ) ಯನ್ನು ವರ್ಣಿಸುವ ಮೂಲಕವಾಗಿದೆ.

> **"ಆದವಾನಿಗೆ ಮೂವತ್ತು ಮೈಲಿಗಳ ದೂರದಲ್ಲಿ, ಆದರೆ - ಒಳಹಾದಿಯಲ್ಲಿ ಹದಿನಾಲ್ಕು ಮೈಲುಗಳ ದೂರದಲ್ಲಿ ಹೊಳಲಗುಂದಿ. ಅದಕ್ಕೆ ಐದು ಮೈಲಿಗಳ ದೂರದಲ್ಲಿ ವಂದವಾಗಿಲು ಎಂಬ ಹಳ್ಳಿಯುಂಟು. ಆ ಹಳ್ಳಿಗೆ ಎರಡೂವರೆ ಮೈಲಿಗಳ ಅಂತರದಲ್ಲಿ ಹರಿವಾಣ ಎಂಬೊಂದು ಹಳ್ಳಿಯಿದೆ. ಆ ಅಂತರದ ಮಧ್ಯೆ, ಕಾಲುಹಾದಿ - ಗಾಡಿ ರಸ್ತೆಯ ಪಕ್ಕಕ್ಕೆ, ಕಣಗಿಲ ಹೂವಿನ ಗಿಡಗಳ ಗುಂಪಿನಲ್ಲಿ, ಎರಡು ಸಮಾಧಿಗಳಿವೆ. ಇತ್ತಿಂದ ಅತ್ತ, ಅತ್ತಿಂದ ಇತ್ತ ಹಾದು ಹೋಗುವವರು ಆ ಸ್ಥಳಕ್ಕೆ ಕಾಲಿರಿಸುತ್ತಲೇ, ಕೆಲವೊತ್ತು ನಿಂತು, ಆ ಸಮಾಧಿಗಳಿಗೆ ನಮಸ್ಕರಿಸಿ, ಮತ್ತೆ ಮುಂದುವರೆಯುತ್ತಿದ್ದರು, ಮುಂದುವರೆಯುತ್ತಿರುವವರು ಈಗಲೂ ಸಹ, ಮುಂದೆಯೂ ಸಹ..."**

ಕಥೆಯ ವಿಶ್ಲೇಷಣೆಗೆ ಮುನ್ನ ಈ ಮೇಲೆ ವಿವರಿಸಿದಂತೆ ಪ್ರಸ್ತುತ ಕಥೆಯಲ್ಲಿ ಪರಿಣಾಮಕಾರಿಯಾಗಿ ವ್ಯಕ್ತಗೊಂಡ ಪ್ರಾದೇಶಿಕತೆಯ ವಿವರಗಳನ್ನು ಗಮನಿಸಬಹುದು. ಈ ವಿವರಗಳು ಸಂವಹನಗೊಳ್ಳುವ ಭಾಷೆಯ ಸ್ವರೂಪ ಕೂಡ ಅಷ್ಟೇ ಮುಖ್ಯವಾದುದಾಗಿದೆ. ನಿದರ್ಶನಕ್ಕೆ –

> **"ಹಳ್ಳಿಯ ಮಡಿಲಲ್ಲಿ...**
>
> **ಹಳ್ಳಿಯವರು, ಗಂಡಸರು ತಮ್ಮದೇ ಮೇಲುಗೈಯಾಗಿ, ದರ್ಪದಿಂದ ಬಾಳು ನಡೆಸುತ್ತಿದ್ದ ಕಾಲದಲ್ಲಿ, ವಂದವಾಗಿಲ ಹಳ್ಳಿಯಲ್ಲಿ ಒಂದು ದಿನ -**
>
> **ಬೇಸಿಗೆಯ ಬಿಸಿಲಿನ ಹೊನಲಿನಲ್ಲೀಜಿ, ದಣಿದು, ದಣಿವಾರಿಸಲು ಅವಸರ**

ಅವಸರವಾಗಿ ಮನೆಗೆ ಮುಖ ಮಾಡಿಕೊಂಡು ಬರುವಾಗ,

ಆಗ -

- ಬಿಸಿಲುಗುದುರೆಗಳು ಕೆನೆಯುತ್ತಿರುತ್ತವೆ - ಅವನ ಮುಂಬಾಳಿನ ಘೋರತೆಯನ್ನು ಕುರಿತು. ನಾಯಿಗಳು ಹೊಲದ ಛತ್ರಿಗಳಾದ ಮರಗಳ ನೆರಳಿನಲ್ಲಿ, ಅರ್ಧಚಂದ್ರಾಕೃತಿಯಲ್ಲಿ ಮಲಗಿ, ಸರಸರನೆ ಹೆಜ್ಜೆಹಾಕುತ್ತಿರುವವನತ್ತ, ಕಣ್ಣು ಪಿಳುಕಿಸಿ ನಾಲಗೆಗಳಿಂದ ಬೆವರಿನ ನೀರನ್ನು ಕಂಬನಿಯ ಕಾಣಿಕೆಯಂತೆ ಸುರಿಸುತ್ತಿರುತ್ತವೆ - ಭೂಮಿಯ ಬೆಂಕಿ ತನುವಿನ ಮೇಲೆ. ಗಾಳಿ ತನ್ನೆದೆಯ ಬಿಸಿಯನ್ನು ಬೀಸುತ್ತಿರುತ್ತದೆ, ಮೊರೆ ಮೊರೆದು... ಒಂದೆರಡು ಹಕ್ಕಿಗಳು ವಿಷ್ಟಲ ರಾಗವನ್ನಾಲಾಪಿಸುತ್ತಿರುತ್ತವೆ - ಮುಂಬರುವ ಬವಣೆಯ ಬಾಳಿನ ರುದ್ರಸಮರದ ಅಂತಿಮ ಹೋರಾಟಕ್ಕೆ ಚರಮಗೀತೆಯಂತೆ...!

ಎದೆಯಲ್ಲಿ ಬೆಂಕಿಯ ಉಸಿರು ಏದುತ್ತಿರುತ್ತದೆ, ನಾಲಗೆ ಒಣಗುತ್ತಿರುತ್ತದೆ...

'ಅಯ್ಯೋ ಇನ್ನೇಕೆ ಈ ಮಣ್ಣ ಮೈಯ ಮೇಲೆ ಮಮತೆ'? ಎಂಬಂತೆ, ಅವನ ಇಡೀ ಮೈಕಣ್ಣೀರಿನಂತೆ, ಬೆವರನ್ನು ಸುರಿಸುತ್ತಿರುತ್ತದೆ... ಕಾಲುಗಳು ಧಾಂಯ್... ಧಾಂಯ್... ಎಂದು ಓಡುತ್ತಿರುತ್ತವೆ...

ಈ ಮೇಲಿನ ನಿರೂಪಣೆಯ ಭಾಷೆ ಈಗಾಗಲೇ ಕನ್ನಡದಲ್ಲಿ ಪ್ರಮುಖವಾಗಿ ರೂಢಿಯಲ್ಲಿರುವ ಗದ್ಯದ ಸ್ವರೂಪದ್ದೇ ಆಗಿದೆ. ವೀರಭದ್ರ ಅವರು ಎಲ್ಲಿಯೂ ತಿಣುಕಿ ತಿಣುಕಿ ಪ್ರಾದೇಶಿಕ ಪದಗಳನ್ನು ನುಡಿಗಟ್ಟುಗಳನ್ನು ಅತಿಯೆಂಬಂತೆ ಪೇರಿಸಲು ಹೋಗಿಲ್ಲ. ಆಗಂತ ಅವರಿಗೆ ಅದು ಕಷ್ಟವೂ ಅಲ್ಲ. ಆದಾಗ್ಯೂ ಈ ನಿರೂಪಣೆಯು ಬಳ್ಳಾರಿ ಸೀಮೆಯ ಬಿಸಿಲಿನ ತಾಪವನ್ನು ಕಣ್ಣಿಗೆ ಕಟ್ಟಿದಂತೆ ಚಿತ್ರಿಸುತ್ತದೆ.

ಕಥೆಯಲ್ಲಿ ಬರುವ ಕಥಾನಾಯಕನು ಬಿಸಿಲಿನ ಝಳದ ಕೊಳದಿಂದೆದ್ದು ಬಂದ ಭೀಮಕಾಯದ ಮನುಷ್ಯ. ತನ್ನವಳನ್ನು ಅಮೃತ ಸದೃಶವಾದ ನೀರಿಗಾಗಿ ಅಪ್ಪಣೆ ಮಾಡುತ್ತಾನೆ. ಅವಳು ಬೇಗ ನೀರು ತಂದುಕೊಡುವುದಿಲ್ಲ. ಅವಳ ಬೇಜವಾಬ್ದಾರಿತನವನ್ನು ಸಹಿಸದ ಇವನು ಮತ್ತೊಮ್ಮೆ ಗುಡುಗಿದ. ಅದಕ್ಕೆ ಪ್ರತಿಯಾಗಿ ಅವಳು 'ಏನದು ನೀನೇನಾದ್ರೂ ಈವೊತ್ತಿನ ಹರಿವಾಣದ ಕರಿ ಹರ್‍ಕೊಂಡು ಬಂದೀಯಾ ಏನು ಇಷ್ಟೊಂದು ಅವಸರ ಮಾಡೋಕೆ' ಎಂದಳು. ಅರರೆರೇ... ಮೃತ್ಯ, ಕಾದು ಕುಳಿತಿದ್ದ ಮೃತ್ಯು ತನ್ನವಳ ನಾಲಗೆಯಿಂದಲೇ ಮಾತುಗಳನ್ನುರುಳಿಸಿ ಮಂಜಿನ ಬಲೆ ಹರಡಿತು. ಎಂದೂ ಸಿಡುಕದವಳು, ಇಂದು, ಅದೂ ಈ ದಿನ, ಹೀಗೆ, ಅವನ ಈ ಅವಸ್ಥೆಯಲ್ಲಿ ಹರಿವಾಣದ ಕರಿಯನ್ನೊಡ್ಡಿ ಅವನ ಪೌರುಷಕ್ಕೇನೇ ಸಡ್ಡುಹೊಡೆಯುವಂತಹ ಮಾತನ್ನಾಡಿದ್ದರಿಂದ ಊರಿಗೇನೇ ಅಪ್ರತಿಮ ವೀರನಂತಿರುವ ತನ್ನನ್ನು, ತನ್ನ ಶೌರ್ಯವನ್ನು ಪರೀಕ್ಷಿಸುವ ಪ್ರಶ್ನೆಯೊಡ್ಡಿದಳೇ?... ಅವನ ಆತ್ಮಾಭಿಮಾನ ಉಕ್ಕೆದ್ದಿತು. ತನ್ನೂರಿಗಿಂತಲೂ ಬೆಳೆಯಲ್ಲಿ ಹುಲುಸಾಗಿ ಪಸಲೀಯುವ ಹರಿವಾಣದಲ್ಲಿ ಇಂದು ಮಾರೆಮ್ಮನ ಪರಿಷೆ... ಅದರ ಹುಲುಸನ್ನೇ ಹೊತ್ತು ತರಬೇಕು, ತರಲೇಬೇಕು ಎಂದು ರೋಷದೊಂದಿಗೆ ಬೆರೆತ ಛಲ ಅವನ ರಕ್ತದಲ್ಲಿ ಹರಿಯಿತು. ಬಚ್ಚಲಿನಲ್ಲಿದ್ದವನು ತಟ್ಟನೆ ಹೊರನೆಗೆದು, ಹೆಗಲಿಗೆ ವಸ್ತ್ರವನ್ನು ಒಗೆದುಕೊಂಡು, ಬಿಗಿದ ಮುಖದಿಂದ, ಏದುವ ಎದೆಯಿಂದ, ರುದ್ರನಾಗಿ ಹೊರಬಿದ್ದ ಕರವೀರ.

ನಂತರ ಊರ ದೇವತೆಯ ಹಬ್ಬದ ವಿವರಗಳು ಕಥೆಯಲ್ಲಿ ಪರಿಣಾಮಕಾರಿಯಾಗಿ ಮೂಡಿಬಂದಿವೆ.

...... ಹರಿವಾಣದ ಅಂದಿನ ವೇಷ,

ಹನ್ನೆರಡು ವರ್ಷಗಳಿಗೊಮ್ಮೆ ಮಾರೆಮ್ಮದೇವಿಯ ಪರಿಷೆಯ ಹರ್ಷವನ್ನುಟ್ಟು ಮೆರೆಯುತ್ತಿತ್ತು. ಹರಿವಾಣ.

ಮಾರೆಮ್ಮನ ಉತ್ಸವಕ್ಕಾಗಿ, ಉತ್ಸಾಹದ ಮೂರ್ತಿಯಾಗಿತ್ತು, ಅಂದು, ಆ ಹಳ್ಳಿ.

ಬಿಸಿಲು - ಮರದಲ್ಲಿ ಕುಳಿತು, ಗಾಳಿಯಲ್ಲಿ ಬೆರೆತು, ಹಳ್ಳಿಯಲ್ಲಿ ಅವಿತು ನೋಡುತ್ತಿತ್ತು - ಹಳ್ಳಿಯ ಹೃದಯವನ್ನು; ಮಾರಮ್ಮನ ಜಾತ್ರೆಯನ್ನು

ಓಹ್ - ಹಳ್ಳಿಗೆ ಹಳ್ಳಿಯೇ ಹುಚ್ಚೆದ್ದು ಕುಣಿಯುತ್ತಿದೆಯೋ ಎಂಬಂತೆ, ಕುಡಿದ ಅಮಲಿನಲ್ಲಿ ಕುಣಿಯುವ ತಂಡವೊಂದು ಕುಣಿದು ಕುಣಿದು, ಕುಣಿಯುತ್ತಿತ್ತು.

ಅಗೋ ಅಲ್ಲಿ ಹ್ಞಾ ಆ ಕಡೆ ಆ ಮದಿಸಿದ ಕೋಣಕ್ಕೆ ಸುಣ್ಣದ ನೀರನ್ನು ಬಲವಂತದಿಂದ ಕುಡಿಸಿ,

ಮನೆ ಮನೆಗೆ ಮೆರೆಯಿಸಿ,

ಅದರ ಕೊಬ್ಬನ್ನಡಗಿಸಲು ಅದನ್ನೇ ಎತ್ತೆತ್ತಿ ಕುಕ್ಕಿ,

ಅದರ ಅರ್ಧಪ್ರಾಣವನ್ನು ನಲುಗಿಸಿ,

ಎಳೆದು ತರುತ್ತಿರುವ ವೀರರ ತಂಡ ತಾಂಡವ ನೃತ್ಯವಾಡುತ್ತ ದೇವಿಯೆಡೆಗೆ ಧಾವಿಸುತ್ತಿತ್ತು

ಹರಕೆ ಹೊತ್ತ ಜನ ಕುಂಭಗಳನ್ನು ಹೊತ್ತು ರುದ್ರ ನೃತ್ಯಗೈಯುತ್ತ ನಡು ನಡುವೆ ಕೇಕೆ ಹಾಕುತ್ತ ದೇವಿಗುಡಿಗೆ ಸಮೀಪಿಸುತ್ತಿದ್ದರು.

ಕೆಲವು ಜನ ಮದನ್ಮೋತ್ತ ಭಿಲ್ಲಯುವತಿಯರು ಬೇವಿನೆಲೆಯ ಸೀರೆಯನ್ನು ಸುತ್ತಿಕೊಂಡು, ದೇವಿಯನ್ನು ಅವಗಾಹನೆ ಮಾಡಿಕೊಂಡಿರುವರೋ ಎಂಬಂತೆ, ಕಾಳಿಯ ಪ್ರತಿರೂಪವನ್ನು ಧರಿಸಿಕೊಂಡಿರುವರೆಂಬಂತೆ, ಕುಣಿಯುತ್ತ, ಮನಬಂದಂತೆ ಕುಣಿಯುತ್ತ, ಹಿಟ್ಟಿನ ಆರತಿಯನ್ನು ಹಿಡಿದು ಹಾರಾಡುತ್ತ, ನೃತ್ಯಗೈಯುತ್ತ ಧಾವಿಸುತ್ತಿದ್ದಾರೆ, ಹಳ್ಳಿಯ ಮತ್ತೊಂದು ಭಾಗದಿಂದ.

ಓಹ್ ಏನೆಂತ ಸಾಹಸಿಗರಿವರು.

ಮಚ್ಚು, ಕುಡುಗೋಲು, ಗಂಡುಗೊಡಲಿ, ಚಂದ್ರಾಯುಧ, ಬಡಿಗೆ, ಅಣಸು, ಬಡಿಗೆಗಳನ್ನೇ ಹಿಡಿದು, ಅವುಗಳನ್ನು ಆಕಾಶದ ಮೋರೆಗೆ ತಿವಿಯುತ್ತ ಎಲಲಲಲ... ಕೇ.... ಹೂ... ಎಂದು ಕೇಕೆ ಹಾಕುತ್ತಾ, ಕೇಕೆಯನ್ನು ಕೇಳಿಗೆ ಕರೆಯುವಂತೆ ಪ್ರತಿಸ್ಪರ್ಧಿಸುವ ತಮಟೆ, ತಪ್ಪಡಿ, ಡೊಳ್ಳು, ನಗಾರಿ ಮುಂತಾದ ರಣವಾದ್ಯಗಳನ್ನು ಮೊಳಗಿಸುತ್ತ, ರಣರಿಂಗಣಗೈಯ್ಯುತ್ತ ಡಿರಿಕೆ ಹಾಕುತ್ತ ನುಗ್ಗುವ ಗೋಳಿಯ ಗುಂಪಿನಂತೆ ಮುನ್ನುಗ್ಗಿ ಬಂದರು. ದೇವೀ ಸಾನ್ನಿಧ್ಯಕ್ಕೆ

ಎಲ್ಲ ಹೊಳೆ, ನದಿಗಳೂ ಒಂದೆಡೆ ಸೇರುವಂತೆ, ಜನ ಸೇರಿದರು. ಏನೆಂಥ ಜನ ಅದೆಂಥ ಗಲಭೆ ಅದೇನು ಆರ್ಭಟ

ಮೈಗೆಲ್ಲ ಅರಸಿಣ-ಕುಂಕುಮದ ಹೊದಿಕೆಯನ್ನೇ ಹೊದ್ದುಕೊಂಡಿರುವರೆಂಬ ಭ್ರಮೆ ಹುಟ್ಟಿಸುವ ರುದ್ರಮೂರ್ತಿಗಳ ಕೋಲಾಹಲಕ್ಕೆ ಕೋಣ ಮೂಕ ಶೋಕ ಮಾಡಿತ್ತು.

ಇಂತಹ ಮೂಕ ಶೋಕದಲ್ಲಿದ್ದ ಕೋಣನನ್ನು ಕಡಿಯಲು ಮೂರೇ ಏಟು ಸಾಕಾಯಿತು. ಕೊಬ್ಬಿದ ಕೋಣನ ನೆಣವನ್ನು ಮುಟ್ಟಲು. ಮಾರೆಮ್ಮ ರಕ್ತದಲ್ಲಿ ಮಿಂದಳು. ಕೋಣನ ತಲೆ ಮಾರೆಮ್ಮನೆದುರಾಗಿ ಕುಳಿತಿತು. ಕೋಣದ ನೆಣವೇ ಪ್ರಣತಿಯಾಗಿ ಅದರ ತಲೆಯ ಮೇಲೆ ದೀಪವಾಗಿ ಉರಿಯಿತು. ಆ ಕೋಣನನ್ನು ಕಡಿದ ರಕ್ತ ಹೊಂಡದ ಹತ್ತಿರ, ಪರ ಊರಿನ ನರಪಿಳ್ಳೆ ಗುರುತಿಸಲ್ಪಟ್ಟರೆ ಸಾಕು ಚಿಲ್ಲನೆ ರಕ್ತ ಕಾರಲೇ ಬೇಕು ಅಂತಹ ಸರ್ಪಗಾವಲು ಕಾದಿತ್ತು - ಕರಿಯ ಸಲುವಾಗಿ. ಎಲ್ಲರೂ ರಣ ನೃತ್ಯದಲ್ಲಿ ತೊಡಗಿದ್ದಾಗ ಕರಿವೀರನು ಸಂದರ್ಭ ನೋಡಿ ತಟ್ಟನೆ ಬಟ್ಟೆಯ ತುಂಡೊಂದನ್ನು ಮಡುವಿನಲ್ಲಿ ಬೀಳಿಸಿ ಕಾಲಬೆರಳುಗಳ ಇಕ್ಕುಳದಲ್ಲಿ ಸಿಕ್ಕಿಸಿ, ನುಸುಳಿಕೊಂಡು

ಹೊರಬಂದ - ಕರಿವೀರ ವಿಜಯೋತ್ಸಾಹದ ಉನ್ಮಾದಿಂದ. ಮೆಲ್ಲಗೆ, ಕೈ ಹಾದು ಬೇವಿನೆಲೆಯ ಕುಚ್ಚು, ಅದುವೆ ಮಾರೆಮ್ಮನ ಕರಿ - ಗಬಕ್ಕನೆ ಉಡಾಯಿಸಿಕೊಂಡು ಹೊರಗೆ ಬಂದು

"...ಊರ ಬುಡ್ಡೆಕಲ್ಲಿಗೆ ರಕ್ತಸ್ನಾತ ವಸನದಿಂದಾವೃತವಾದ ಹೆಬ್ಬೆರಳನ್ನು ತೋರಿಸಿ, ಬುಡ್ಡೇಕಲ್ಲನ್ನು ಮೆಟ್ಟಿನಿಂತು, ತನ್ನೆಲ್ಲ ಶಕ್ತಿಯನ್ನೆಳೆದು ತಂದು, ಎಲ್ಲರ ಕಿವಿಯ ತಮ್ಮಟೆ ಛೇದಿಸುವ ಹಾಗೆ

ಎಲಲಲಾ ಕೇ... ಹೂ... ಕರಿ ಹರಿದಿದೇನೆ, ಹೋಯ್... ಹುಲುಸೊಯ್ಯುತ್ತೇನೆ... ಹುಲುಸುಯ್ಯೋತ್ತೇನೆ... ಹೇಯ್... ಹುಲುಸೊಯ್ಯುತ್ತೇನೆ... ಯಾರಾದ್ರೂ ಶೂರರಿದ್ರೆ ಬನ್ರಲೇ...

ಎಂದು ಹೃದಯ ಸೋಸಿ, ಕೂಗಿ, ಅನಿರೀಕ್ಷಿತವಾಗಿ ಬರುವ ಬಿರುಗಾಳಿಯ ರಭಸದಿಂದ ತನ್ನ ಊರಿಗೆ ಅಭಿಮುಖವಾಗಿ ಓಡಿದ ಬೆನ್ನ ಹಿದೆ ಮೃತ್ಯುವನ್ನು ಕಟ್ಟಿಕೊಂಡು..."

ಇಂಥ ಅಸಮಾನ್ಯ ಸಾಹಸಕ್ಕೆ ಕೈ ಹಾಕಿದ ಕರಿ ವೀರ ಹರಿವಾಣದ ಧೀರರ ಗುಂಪೊಂದು ಬೆಂಬತ್ತಿ ಬರುತ್ತಿದ್ದರೂ ಅವರಿಂದ ತಪ್ಪಿಸಿಕೊಂಡು ಊರಿನ ಕಡೆ ಧಾವಿಸತೊಡಗಿದ್ದನು. ಕಾಲಿಗೆ ಮುಳ್ಳು ಚುಚ್ಚಿದರೂ ಮೃತ್ಯುವನ್ನೇ ಲೆಕ್ಕಿಸಿದ ಇವನು ಓಡಿಯೇ ಓಡಿದ. ಆದರೆ,

ಮುಪ್ಪಾನ ಮುದುಕಿಯ ತಲೆಯಾಯಿತು ಕಾಲು...

ಉಸುಬಿನ ರಾಶಿಯಲ್ಲಿ ಓಡುವ ಮಗುವಿನಂತಾಯಿತು ಕಾಲು...

ಎದೆ ಸೇದೆಳೇಯುತ್ತಲೇ ಇತ್ತು...

ಕಣ್ಣುಗಳ ಮುಂದೆ ಅದಾವುದೋ ಕಾಣದ ಕೈಯೊಂದು ಕರಿಯ ಪರದೆಯನ್ನು ಹಿಡಿಯಿತು...

ಭೂಮಿ ಸುತ್ತುವಂತೆ, ತಲೆ ಸುತ್ತಲಾರಂಭಿಸಿತು.

ಶಕ್ತಿ ಕುಸಿದು, ಕಾಲ್ತೊಡಕಿಗೆ ಸಿಕ್ಕು ದಡಮ್ಮನೆ ನೆಲಕ್ಕುರುಳಿದ...

ತಲೆ ಕಲ್ಲಿಗೆ ತಾಕಿತು...

ತಗ್ಗಿನಲ್ಲಿರುವ ತನ್ನ ಊರ ಗಡಿ ಮೂರು ಮಾರಿನ ಹಗ್ಗದಂತೆ ತೋರಿತು.

ಮೂರೇ ಮೂರು ಮಾರು - ಸ್ವರ್ಗ....

ಆದರೆ

ಮೃತ್ಯುವಿನ ಮಂಜಿನ ಮಂದಿರಕ್ಕೆ ಆಹ್ವಾನ ಗಳಿಗೆ ಗಳಿಗೆಗೂ ಬೆಂಬತ್ತಿ ಸಮೀಪಿಸುತ್ತಿದೆ...

ಎದೆಯಲ್ಲಿನ ಧೈರ್ಯ, ಜಂಘೆಗಳಲ್ಲಿನ ಶಕ್ತಿ, ಮರಳಲ್ಲಿಂಗುವ ಎಣ್ಣೆಯಾದವು...

ಕೋಲಾಹಲ ಕೇಳಿ ಕೇಳಿ ಬರುತ್ತಿದೆ. ಗಳಿಗೆ ಗಳಿಗೆಗೆ ಸಮೀಪಿಸಿಕೊಂಡು.

ಸ್ವರ್ಗ ಮೂರು ಮಾರಲ್ಲೇ ಇದೆ.

ಹ್ಞು

ಸಾವು ಸಮೀಪಿಸುತ್ತಲೇ ಇದೆ.

ಆದರೂ ಅಲ್ಲಿಂದ ತಪ್ಪಿಸಿಕೊಂಡು ಹೋಗಲು ಪ್ರಯತ್ನಿಸಿದ ಕರಿವೀರ ಹೇಗೋ ಬಚ್ಚಿಟ್ಟುಕೊಳ್ಳಲೆತ್ನಿಸಿದನು. ಆದರೆ ಆ ಮಾರ್ಗದಲ್ಲಿ ಬರುತ್ತಿದ್ದ ಕರಿವೀರನ ಊರಿನವಳೇ ಆದ ಅವಳನ್ನು ಬೆಂಬತ್ತಿ ಬಂದ ಆ ಗುಂಪು

ಬಂದು ಕೇಳಲಾಗಿ ಭಯದಿಂದ ತನಗರಿವಿಲ್ಲದಂತೆಯೇ ಅವನು ಹೋದ ದಿಕ್ಕನ್ನು ತೋರಿಸಿದಳು. ಮರುಕ್ಷಣವೇ ತನ್ನ ತಪ್ಪನ್ನು ಅರಿತುಕೊಂಡು ಪಶ್ಚಾತ್ತಾಪ ಪಟ್ಟು ಕಟ್ಟಿಗೆಯ ಹೊರೆಯಲ್ಲಿದ್ದ ಮಚ್ಚಿನಿಂದ ತನ್ನ ನಾಲಿಗೆಯನ್ನು ಕೊಯ್ದುಕೊಂಡಳು. ಅವಳ ಕಣ್ಣೆದುರೇ ಕರಿವೀರನನ್ನು ಬೆನ್ನಟ್ಟಿದ ಗುಂಪು ಅವನನ್ನು ಕೊಚ್ಚಿ ಕರುಳನ್ನು ಮಾಲೆಯನ್ನಾಗಿಸಿಕೊಂಡು ರಕ್ತದ ತಿಲಕಗಳನ್ನು ಧರಿಸಿ, ಧಿಮಿ ಧಿಮಿ ಕುಣಿಯುತ್ತಾ ಹಾದುಹೋಯಿತು. ಕರಿವೀರನು ಸಾವನ್ನಪ್ಪಿದರೂ ಹುಲುಸು ಮಾತ್ರ ರುಂಡದೊಂದಿಗೆ ಪಂದವಾಗಿಲಿನ ಗಡಿಯೊಳಗೆ ಬಿದ್ದಿತ್ತು. ಮುಂಡ ಈ ಕಡೆಗೆ ಬಿದ್ದಿತ್ತು. ಆ ಲಂಬಾಣಿ ಸ್ತ್ರೀಯು ಆ ಆಘಾತದಿಂದ ಚೇತರಿಸಿಕೊಳ್ಳಲೇ ಇಲ್ಲ. ಅವಳೂ ಸಹ ಕಣ್ಮುಚ್ಚಿದಳು. ಇಲ್ಲಿಗೆ ಕಥೆ ಮುಕ್ತಾಯವಾಗುತ್ತದೆ.

ಗ್ರಾಮದೇವತೆಗಳ ಹಿನ್ನೆಲೆಯಲ್ಲಿ ನಡೆಯುವ ಮಾರಿಹಬ್ಬದ ದಿನ ಕೋಣನನ್ನು ಕಡಿದಾಗ ಅದರ ರಕ್ತದ ಕುರುಹು ಮತ್ತು ಕರಿ ಬೇವಿನ ಎಲೆಯ ಗುಚ್ಛ, ಇವನ್ನು ಪರ ಊರಿನವರು ಅಪಹರಿಸಿದಾಗ ಮಾರಿಯ ಆರಾಧನೆಯಿಂದ ದೊರೆಯುವ ಫಲವೆಲ್ಲಾ ಅಪಹರಿಸಿದ ಊರಿನವರಿಗೆ ಸಲ್ಲುತ್ತದೆಯೆಂಬ ನಂಬಿಕೆ ಈ ಆಚರಣೆಯಲ್ಲಿದೆ. ವಿಚಿತ್ರವೆಂದರೆ ಈಗಲೂ ಈ ಭಾಗದಲ್ಲಿ ಇಂತಹ ನಂಬಿಕೆ ಜೀವಂತವಾಗಿದೆ. ಅಷ್ಟೇ ಕಠೋರವಾಗಿದೆ. ಆದರೆ ಈ ರೀತಿ ಕರಿಯನ್ನು ಅಪಹರಿಸಲು ಸಾಧ್ಯವಾಗದಂತೆ ಪರ ಊರಿನವರ್‍ಯಾರನ್ನೂ ಕೋಣನನ್ನು ಕಡಿಯುವ ಸ್ಥಳಕ್ಕೆ ಪ್ರವೇಶಿಸದಂತೆ ಮುಂಜಾಗರೂಕತೆಯನ್ನು ವಹಿಸುತ್ತಾರೆ. ಈ ಕಥೆಯಲ್ಲಿನ ನಾಯಕನು ಧೈರ್ಯವಹಿಸಿ ಕರಿ ತಂದು ದುರಂತದ ಸಾವನ್ನು ಅಪ್ಪುತ್ತಾನೆ. ಅದಕ್ಕೆ ಸಾಕ್ಷಿಯಾಗಿ ಕಥೆಗಾರರು ಕಥೆಯ ಆರಂಭದಲ್ಲಿಯೇ ಕರಿವೀರಪ್ಪನ ಗುಟ್ಟೆಯ ಕುರಿತಾಗಿ ವಿವರಿಸುತ್ತಾರೆ. ತಮ್ಮ ಕಥೆಯ ಹಿಂದಿನ ಪ್ರೇರಣೆಯನ್ನು ತಾವಾಗಿಯೇ ತೋರಿಸಿಕೊಡುತ್ತಿದ್ದಾರೆ. ಒಟ್ಟಿನಲ್ಲಿ ಕಥೆಯಲ್ಲಿ ಬರುವ ವಿವರಗಳು, ಅದರ ಆಶಯ, ತಂತ್ರ, ನಿರೂಪಣೆ ಎಲ್ಲವೂ ಪ್ರಾದೇಶಿಕ ವೈಶಿಷ್ಟ್ಯತೆಯಿಂದ ಕೂಡಿದ ಆಚರಣೆಯೊಂದನ್ನು ಪರಿಣಾಮಕಾರಿಯಾಗಿ ಕಥೆಯಲ್ಲಿ ಅಭಿವ್ಯಕ್ತಿಸಿದ್ದಾರೆಂದು ಹೇಳಬಹುದಾಗಿದೆ.

**ಅನಾಥ ಪಕ್ಷಿಯ ಕೃಷ್ಣಪಕ್ಷ**

ವೀರಭದ್ರ ಅವರ ಈವರೆಗಿನ ಸಮಗ್ರಕಥೆಗಳ ಸಂಕಲನಕ್ಕೆ ಅನಾಥ ಪಕ್ಷಿಯ ಕಲರವ ಎಂತಲೇ ಹೆಸರಿಸಲಾಗಿದೆ. ಬಹುಶಃ ಅವರು ಒಟ್ಟಾರೆ ಕಥೆಗಳ ಸಂಕಲನಕ್ಕೆ ಅನಾಥ ಪಕ್ಷಿಯ ಕೃಷ್ಣಪಕ್ಷ ಎಂದು ಹೆಸರಿಡಲು ಈ ಕಥೆ ಕಾರಣವಾದಂತಿದೆ. ಇಲ್ಲಿ ಅಧ್ಯಯನದ ಹಿನ್ನೆಲೆಯಲ್ಲಿ ಆಯ್ಕೆಮಾಡಿಕೊಂಡ ಪ್ರಾದೇಶಿಕತೆಯನ್ನು ಧ್ವನಿಸುವ ಕಥೆಗಳಲ್ಲಿ ಈ ಕೇಥೆಯೂ ಒಂದು. ಶೀರ್ಷಿಕೆಯು ಧ್ವನಿಸುವಂತೆ ಅವ್ಯಕ್ತ ಭಾವನೆಗಳಿಗೆ ರೂಪುಕೊಡಲಾರದೆ, ಮನದ ತಳಮಳ, ನೋವು ಇದೆಲ್ಲವನ್ನೂ ಒಳಗೊಂಡಂತೆ ಕಾಡುವ ಅನಾಥ ಮನೋಭಾವ ಕಥೆಯಲ್ಲಿ ಪರಿಣಾಮಕಾರಿಯಾಗಿ ಮೂಡಿಬಂದಿದೆ.

ದಕ್ಷಿಣ ಭಾರತದ ಯಾವುದೋ ಮೂಲೆಯಲ್ಲಿದ್ದ ನಿರೂಪಕರಿಗೆ ಉತ್ತರ ಭಾರತದ ಮತ್ತೊಂದು ಮೂಲೆಯಲ್ಲಿ ಖಾಯಂ ನೌಕರಿ ದೊರೆತಿರುತ್ತದೆ. ನೌಕರಿಗೆ ಹೋಗಿ ಸೇರಿಕೊಳ್ಳಲು ಕೇವಲ ಹದಿನೈದು ದಿನಗಳು ಮಾತ್ರ ಉಳಿದಿವೆ. ಈ ನಡುವೆ ಎಂಟು ವರ್ಷಗಳ ಹಿಂದೆ ಹೇಳದೆ ಕೇಳದೆ ಊರು ಬಿಟ್ಟ ನಿರೂಪಕರಿಗೆ ಒಮ್ಮೆ ಊರಿಗೆ ಹೋಗಿಬರಬೇಕೆಂಬ ಆಶೆಯಾಗುತ್ತದೆ. ಅಲ್ಲಿರುವ ಸೋದರ ಮಾವ, ಅತ್ತೆ ಮತ್ತು ಅತ್ತೆಯ ಮಗಳು ಗೌರಿ ಇವರ ಸ್ಥಿತಿ ಏನಾಗಿದೆಯೋ ಎಂಬ ಆತಂಕ ಬೇರೆ ಅವರನ್ನು ಹುಟ್ಟೂರಿಗೆ ಹೋಗಲು ಪ್ರೇರೇಪಿಸುತ್ತದೆ. ನಿರೂಪಕರು ಹೇಳದೆ ಕೇಳದೆ ಮನೆಬಿಟ್ಟು ಹೋಗಲು ಇರುವ ಕಾರಣವೂ ಕೂಡ ಕಥೆಯ ನಿರೂಪಣೆಯಲ್ಲಿ ಮಧ್ಯೆದಲ್ಲಿ ಬರುತ್ತದೆ. ಬಹುಶಃ ಇದು ಓದುಗನಲ್ಲಿ ಕುತೂಹಲ ಉಳಿಸಲು ಲೇಖಕರು ಬಳಸಿರುವ ತಂತ್ರವಾಗಿರಬಹುದು.

**ನಡೆಯುತ್ತಿದ್ದೆ. ನನ್ನೊಳಗೂ ಏನೇನೋ ನಡೆಯುತ್ತಲೇ ಇತ್ತು –**

**ಈಗ ನನ್ನನ್ನು ನೋಡಿ, ಚಿಕ್ಕಮಾವ ಎಷ್ಟು ದಂಗಾಗಬಹುದು? ಊಹಿಸಿದೆ.**

> **ಕಚುಗುಳಿಯಿಟ್ಟಂತಾಯಿತು. ಚಿಕ್ಕ ಮಾವನ ಮೂರನೇ ಮಡದಿ ಹೇಗೆ ವರ್ತಿಸುವಳು? ನೆನೆಯುತ್ತಲೇ - ತಣ್ಣನೆಯ ಬೆಳಗಿನ ಗಾಳಿಯಲ್ಲಿ, ನನ್ನ ಬೆನ್ನಿನ ಇಳಿಜಾರಿನಲ್ಲಿ ಬೆವರಿನ ಹನಿಗಳು ಸೆಲೆಯೊಡೆದವು! ನನ್ನ ದೊಡ್ಡ ಮಾವನ ಮಗಳು ಗೌರಿ (ನನ್ನನ್ನು ಮಾವಾ, ಓ ಮಾವಾ, ಕೋತಿ ಮಾವಾ... ಎಂದೆಲ್ಲಾ ಕರೆದು ನಗೆಯಾಟಿಕೆ ಮಾಡಿ, ನಗಿಸುತ್ತಿದ್ದಳು...) ಓಡಿಬಂದು, ನನ್ನೆಡೆಗೆ ಬಿಟ್ಟ ಕಣ್ಣಿನಿಂದ ದಿಟ್ಟಿಸುವಳು... ಈಗ ಹದಿನೆಂಟರ ತರುಣಿಯಾಗಿರುತ್ತಾಳೆ. ಯೌವನದ ಬಂಗಾರದ ನಗೆಯ ಹೂ ಅರಳೀತು... ಹನ್ನೆರಡಂಕಣದ ಆ ಮುದಿ ಮನೆಯ ಆನೆ ಕಾಲಿನಂಥ ಕಂಬಗಳೂ, ವಿಶಾಲವಾದ ಕೋಣೆಗಳೂ, ಮೂಲೆ ಮೂಲೆಗಳೂ - 'ಓ, ಇಲ್ಲೆಲ್ಲಾ ನೀನು ಸುತ್ತಾಡಿದೆ. ಎಷ್ಟೊಂದು ವರ್ಷಗಳಾಯಿತು! ನೀನಿಂದು ಬಂದೆ ಬಾ! ಬಾ! ಎಂದು ಸ್ವಾಗತಿಸುತ್ತವೆ. (ಅಜ್ಜಿ ಇದ್ದಿದ್ದರೆ - ಓಡಿಬಂದು, ನನ್ನನ್ನಪ್ಪಿ ಅಬ್ಬಬ್ಬರಿಸಿ ಅಳುತ್ತಿದ್ದಳೇನೋ... ಆದರೆ ನನ್ನಜ್ಜಿ ಇಲ್ಲ... ಹಿತ್ತಲಲ್ಲಿ ಗೌರಿ ಮತ್ತು ನಾನು, ಇಬ್ಬರೂ ಸೇರಿ ಅಂದು ನೆಟ್ಟಂಥ ಮಲ್ಲಿಗೆ ಬಳ್ಳಿ ಹೊದರು ಹೊದರಾಗಿ, ಹಸುರಿನ ಮೇಲೆ ಮೊಸರು ಚೆಲ್ಲಿದಂತಿರುವ ಮಲ್ಲಿಗೆಗಳನ್ನು ಬಿಡುತ್ತಿರಬಹುದು. ಅವುಗಳನ್ನು ಗೌರಿ ಖಂಡಿತ ಮುಡಿದುಕೊಂಡಿರುತ್ತಾಳೆ, ಖಂಡಿತ...**

ಹೀಗೆಂಬು ಯೋಚಿಸುತ್ತಾ ಬಂದ ನಿರೂಪಕರಿಗೆ ಭ್ರಮನಿರಶನವಾಗುತ್ತದೆ. ಮನೆಯ ಸ್ಥಿತಿಯನ್ನು ನೋಡಿ ಯಾರೋ ಸುತ್ತಿಗೆಯಿಂದ ಬಲವಾಗಿ ತಲೆಗೆ ಹೊಡೆದಂಥ ಅಘಾತವಾಗುತ್ತದೆ. ಮನೆಯ ಹೆಬ್ಬಾಗಿಲು ಮುರಿದು ಬಿದ್ದು ಗೋಡೆಗಳೆಲ್ಲಾ ಬಿದ್ದುಹೋಗಿವೆ. ಗಿಡಗಂಟೆಗಳು ಬೆಳೆದಿವೆ. ನಂತರ ನಿರೂಪಕರು ಕಷ್ಟದಿಂದ ಸಾವರಿಸಿಕೊಂಡು ಬಾಲ್ಯಮಿತ್ರನ ಮನೆಯಲ್ಲಿ ವಿಶ್ರಾಂತಿ ಪಡೆಯುತ್ತಾರೆ. ನಿರೂಪಕರು ಚೇತರಿಸಿಕೊಂಡ ನಂತರ ಸುರುಳಿ ಸುರುಳಿಯಾಗಿ ಗತದ ನೆನಪುಗಳು ಬಿಚ್ಚಿಕೊಳ್ಳುತ್ತಾ ಸಾಗುತ್ತವೆ. ಚಿಕ್ಕಮಾವನಿಗೆ ಮೂರನೆಯ ಮದುವೆಯಾಗಿರುತ್ತದೆ. ಮದುವೆಗೆ ಮುನ್ನು ಅಜ್ಜಿಗೆ ಮದುವೆ ಬೇಡ ಎಂದಾಗ ಅಜ್ಜಿಯು ನಿರೂಪಕರನ್ನು ತೋರಿಸಿ 'ಇವ್ನು ನಿನ್ನ ತಂಗೀ ಮಗ. ಈಗ ನಿನ್ನ, ಪಂಚಿಗೆ ಬಿದ್ದಾನೆ. ಹುಟ್ಟುತ್ಲೆ ಖೋಡಿ, ತಂದೆ ತಾಯೀನ ಕಳಕೊಂಡ್ತು... ಗೌರಿಯನ್ನು ತೋರಿಸಿ ಇದು ನಿನ್ನಣ್ಣನ ಪಿಳ್ಳೆ, ಇದೂ ತಂದೆ ತಾಯೀನ ಕಳಕೊಂಡ್ತು... ಈ ಎಲ್ಡು ಅನಾಥ ಪಕ್ಷಿಗಳನ್ನು ಹೆಂಗೆ ನೋಡ್ಕಂಬೋದು ನಾನಂತೂ ಮುದಿಮೂಳ. ಈಗ ಬರೋಳಾದ್ರೂ ನನ್ನ ಖಾಸಾ ತಮ್ಮನ ಮಗಳು. ಕರುಳಿಗೆ ಕರುಳು ಅಂತ ಪ್ರೀತಿಯಿಂದ ನೋಡ್ಕಂತಾಳೆ... ನೀನು ಸುಂಕೆ ಲಗ್ನ ಆಗು...' ಎಂದು ಬಲವಂತದ ಮದುವೆಗೆ ಒಪ್ಪಿಸಿದ್ದಳು.

ಆದರೆ ಚಿಕ್ಕತ್ತೆಯು ಲೈಂಗಿಕ ಅತೃಪ್ತಿಯಿಂದಾಗಿ ನಿರೂಪಕನಿಗೆ ಕಿರಿಕಿರಿ ಆರಂಭವಾಗುತ್ತದೆ.

> **ಯಾವುಯಾವುವೋ ಪುಸ್ತಕಗಳನ್ನು ನನ್ನ ಚಿಕ್ಕತ್ತೆ, ಮಹಡಿ ಮೇಲಿನ ಮಂಚದ ಮೇಲೆ (ಬೋರಲಾಗಿ) ಮಲಗಿ ಓದುತ್ತಿದ್ದಂತೆ ನನಗೀಗ - ನೆನಪಿನ ಲೋಕಕ್ಕೆ ಎಳೆದೊಯ್ಯಲು, ಉರುಳಿ ಬಂದಿತು - ಯಾವುದೋ ಚಿತ್ರಪರಂಪರೆ... ವಿಚಿತ್ರ... ಓದುವುದು ಸಾಕೆನಿಸಿದಾಗ, ನನ್ನನ್ನು ಕರೆದು ನನ್ನ ಕೈ ಹಿಡಿದು ನೆಟ್ಟ ದೃಷ್ಟಿಯಿಂದ ನನ್ನ ಕಣ್ಣುಗಳಲ್ಲಿ ಇಣುಕುತ್ತಿದ್ದಳಲ್ಲವೇ? ಕೇವಲ... ಇಣುಕುತ್ತಿದ್ದಳೇ? ಊಹುಂ ತಟ್ಟನೆ ಬಿಗಿಯಾಗಿ ಬಿಗಿದುಕೊಳ್ಳುತ್ತಿದ್ದಳು ನಾನು ಕೊಸರಿಕೊಳ್ಳಲೆತ್ನಿಸಿದರೆ - 'ಛಟೀರನೆ' ಏಟು ಬಿಗಿಯುತ್ತಿದ್ದಳು. ಕೊಸರಿಕೊಳ್ಳದೆ ನಿಶ್ಚಲವಾಗಿದ್ದರೆ ನನ್ನನ್ನು ಹಣ್ಣು ಹಣ್ಣು ಮಾಡಿ ಬಿಡುತ್ತಿದ್ದಳು. ಆ ಎಲ್ಲ ಕಾರ್ಯಗಳು ಹೇಗಿದ್ದುವೆಂದರೆ ಅಪರಿಪಕ್ವ ಹಣ್ಣನ್ನು ಹಿಸುಕಿ, ಹಿಸುಕಿ, ಮೆತ್ತಗಾಗಿಸಿ, ಮಾಗಿಸುವಂತಿದ್ದವು...!**

ಇಂತಹ ಸಂದಿಗ್ಧ ಸ್ಥಿತಿಯಲ್ಲಿ ನಿರೂಪಕರು ಅನ್ನ ಇಟ್ಟ ಮನೆಗೆ ಕನ್ನ ಕೊರೆಯಲೊಪ್ಪದೆ ಹೇಳದೆ ಕೇಳದೆ ಓಡಿಹೋಗಲು ಕಾರಣವಾಯಿತು. ಪುನಃ ಎಂಟು ವರ್ಷಗಳ ನಂತರ ಆ ಮನೆಯನ್ನು, ಗೌರಿಯನ್ನು ನೋಡುವ

ಕಾತುರದಿಂದ ಬಂದಾಗ ಇದಿರಾದದ್ದು ಅಘಾತಕಾರಿಯಾಗಿದ್ದಿತು. ಕೊನೆಗೆ ಲೇಖಕರು ಚಿಕ್ಕತ್ತೆಯ ತವರುಮನೆಯನ್ನು ಸೇರಿದ್ದಾಳೆಂಬ ವಿಷಯ ತಿಳಿದು ಅಲ್ಲಿಗೆ ಹೋಗಿ ಬಾಗಿಲು ತಟ್ಟಲಾಗಿ ಚಿಕ್ಕತ್ತೆಯೇ ಬಾಗಿಲು ತೆರೆದಳು. ಅಲ್ಲಿ ಗೌರಿ ಇರಲಿಲ್ಲ. ಮಾವನೂ ಇಹಲೋಕ ತ್ಯಜಿಸಿದ್ದ ಸಂಗತಿ ತಿಳಿಯಿತು. ಚಿಕ್ಕತ್ತೆ ಮಾವ ಸತ್ತಮೇಲೆ ಗಲ್ಲಾಮೀಸೆಯ, ಗಡಸುಮುಖದ, ಕಪ್ಪು ಮುಖಮಲ್ಲಿನ ಟೋಪಿಯ ವ್ಯಕ್ತಿಯೊಬ್ಬನನ್ನು ತಿರುಗಿ ಮದುವೆಯಾಗಿದ್ದಳು. ಗೌರಿಯ ವಿಷಯ ತಿಳಿಯಲಿಲ್ಲ. ಆ ನಂತರ ನಿರೂಪಕರ ನೆನಪಿನ ಸುರುಳಿಯಲ್ಲಿ ಅಜ್ಜಿಯು ಮತ್ತೊಮ್ಮೆ ಪ್ರತ್ಯಕ್ಷಳಾಗುತ್ತಾಳೆ. ನಿರೂಪಕರ ಬಾಲ್ಯದಲ್ಲಿ ರಜಾಕಾರರ ಹಾವಳಿಯಿಂದ ಆ ಕುಟುಂಬವನ್ನು ಮುಸ್ಲಿಂ ಕುಟುಂಬದ ಸ್ತ್ರೀಯೊಬ್ಬಳಿಂದಲೇ ರಕ್ಷಿಸಲ್ಪಟ್ಟದ್ದು ಕಣ್ಣಿಗೆ ಕಟ್ಟುತ್ತದೆ. ಅದಕ್ಕೆ ಸೇಡು ಪ್ರತಿಸೇಡು ಹೀಗೆ ಹಿಂದು ಮುಸ್ಲಿಂ ಘರ್ಷಣೆಯ ವಿವರಗಳೂ ಕಥೆಯಲ್ಲಿ ಬರುತ್ತವೆ.

ನಂತರ ನಿರೂಪಕರಿಗೆ ಗೌರಿಯ ವಿಷಯ ತಿಳಿಯುತ್ತದೆ. ಗೌರಿಗೆ ಚಿಕ್ಕತ್ತೆ ಕಾಟಕೊಟ್ಟು ಮದುವೆ ಮಾಡಲಾಗಿರುತ್ತದೆ. ಅವಳೀಗ ಸಿಡಿಗಿನಮೊಳದಲ್ಲಿರುವ ವಿಷಯ ತಿಳಿದುಬರುತ್ತದೆ. ಗೌರಿಯ ನೆನಪು ಹೊತ್ತು ಹೋದ ನಿರೂಪಕರು ಮರುದಿನ –

> **...ಮಧ್ಯಾಹ್ನದ ಬಿಸಿಲು ರಣ ರಣಗುಟ್ಟುತ್ತಿತ್ತು - ಮತಾಪು ಹಚ್ಚಿದಂತೆ ನಿಗಿನಿಗಿ ಉರಿಯುತ್ತಿತ್ತು. ಆ ಮನೆಯ ಅಂಗಳದಲ್ಲಿ ತೆನೆಗಳನ್ನು ಒಣಗಲು ಹಾಕಿದ್ದರು. ಜಗುಲಿಯ ಕೆಳಗೆ ಎರಡು ಹುಡುಗರು, ಒಂದು ಹೆಣ್ಣು, ಒಂದು ಗಂಡು ಆಟದಲ್ಲಿ ನಿಮಗ್ನವಾಗಿದ್ದುವು. ಆಹ! ಗೌರಿಯ ಪಡಿಯಚ್ಚುಗಳು! ಕಣ್ಣು ತುಂಬಿ ಬಂದಿತು. ಕತ್ತು ಬಿಗಿದುಕೊಂಡಿತು. ಮುಂದರಿದೆ. ಅಂಗಳಕ್ಕೆ ಹೋದೆ. ನಿಂತೆ. ಜಗುಲಿಯ ಮೇಲೆ ಗೌರಿ ಜೋಳ ಹಸನು ಮಾಡುತ್ತಿದ್ದಳು. ಮೊದರದಲ್ಲಿ ಬಿದ್ದ ನೆರಳು ನೋಡಿ, ತಟ್ಟನೆ ತಲೆ ಎತ್ತಿದಳು. ಅದೇ ಸ್ನಿಗ್ಧ ಸೌಂದರ್ಯದ ಮುಖ... ಕಣ್ಣಿನಿಂದ ಈಂಟತೊಡಗಿದೆ.**
>
> **... ಒಂದು ಕ್ಷಣದಲ್ಲಿ - ಆ ಎರಡೂ ಬೋಗೆಸೆಯಗಲ ಕಣ್ಣುಗಳಲ್ಲಿ ಅಸಂಖ್ಯಾತ ಭಾವನೆಗಳ ಬುಗ್ಗೆ... ಬುಗ್ಗೆ... ಗಂಟು... ಗಂಟು... ಕಗ್ಗಂಟು, ಕಲಸುಮೇಲೋಗರ... ಸಂತೆ, ಜಾತ್ರೆ! ಕೇವಲ, ಹೌದು, -ಕೇವಲ ಕ್ಷಣಗಳವರೆಗೆ ಮಾತ್ರ... ಅನಂತರ? ಅದೆಲ್ಲವೂ ತಟ್ಟನೆ ಮಂಗಮಾಯವಾಗಿ, ಕಾಂತಿ ಸತ್ತ ಶವದ ಕಣ್ಣುಗಳಾಗಿಬಿಟ್ಟವು... ದೂರದ ಕಣಿವೆಯಿಂದ ಕೇಳಿಸುವ ದನಿಯಂತೆ ಕೇಳಿಸಿತು ದನಿಯೊಂದು -**
>
> **"ಯಾ..ರು?"**
>
> **ಏನೆಂದು ಹೇಳಲಿ? ನಾನು ಯಾರೋ"? ಇದೇನಿದು??**
>
> **"ನಾ...ನಾನು, ಗೌರೀ..."**
>
> **- ಮತ್ತೆ ಕಣ್ಣಲ್ಲಿ ಭಾವನೆಗಳ ರಂಕುರಾಟ್ನ ಗಿರ್ರೆಂದು ತಿರುಗಿ, ತಟ್ಟನೆ ನಿಂತು ಬಿಟ್ಟಿತು.**
>
> **"ಯಾರಪ್ಪಾ ನೀನು? ನಮ್ಮೋರಿಲ್ಲ. ಹೊಲಕ್ಕೋಗಾರೆ..."**
>
> **(ನನ್ನೆದೆಗೆ ಅವ್ಯಕ್ತ ಕಠಾರಿ ನಾಟಿತ್ತು)**
>
> **"ಓ ಹೌದು... ಆ ಹೆಸರಿನಾತ, ಯಾರೋ ದೂರದ ಸಂಬಂಧಿ ಒಬ್ಬಾತ ಇದ್ದ... ಆದ್ರೆ... ಆತ ಸತ್ತುಹೋಗಿ ಎಂಟು ವರ್ಷಗಳಾಯ್ತಲ್ಲ...! ನೀವ್ಯಾರೋ ನಂಗೊತ್ತಿಲ್ಲಪ್ಪಾ...!**
>
> **(ಯಾರೋ ದೂರದ ಸಂಬಂಧಿ...! ಎಂಟು ವರ್ಷ...! ಆತ ಸತ್ತು ಹೋಗಿ**

ಎಂಟು ವರ್ಷಗಳಾಯಿತೇ ಹಾಗಾದರೆ ನಾನಾರು???)

- ಬರಸಿಡಿಲು ನೋಡಿರಲಿಲ್ಲ. ಅನುಭವಿಸಿದೆ. ಗಿರ‍್ರನೆ ನೀರು ತಿರುಗಿತು, ಕಣ್ಣಲ್ಲಿ -

"ಗೌ...ರೀ..."

ಇಲ್ಲ - ತಗ್ಗಿಸಿದ ತಲೆ ಮೇಲೇಳಲಿಲ್ಲ.

ಮೊರದಲ್ಲಿ ಜೋಳದ ಮೇಲೆ ಆಡುತ್ತಿದ್ದ ಬೆರಳುಗಳು ಚಲಿಸಿ ನಿದಾನವಾಗಿ ಚಲಿಸಿ, ಕೊನೆಗೆ, ಇಲ್ಲ - ಚಲಿಸಲಿಲ್ಲ

"ಗೌರೀ..."

ಇಲ್ಲ - ನೋಡಲಿಲ್ಲ, ಮಾತನಾಡಲಿಲ್ಲ, ಚಲಿಸಲಿಲ್ಲ, ತಲೆ ಎತ್ತಲಿಲ್ಲ.

ಅಂಗಳದಿಂದ ಹುಡುಗಿ ಕೂಗಿತು -

"ನೋಡಂಗೇ... ಅಮ್ಮಾ... ಇವ್ನು ರಾಸ್ಸೇಖ್ರು ಹೊಡಿತಾನೆ?"

(ಓ, ಮಗನ ಹೆಸರು ರಾಜಶೇಖರ! ನಾನು -?!)

ಊಹುಂ, ಇಲ್ಲ - ಮಗಳಿಗೆ ಉತ್ತರ ನೀಡಲಿಲ್ಲ.

(ಯಾವ ರಾಜಶೇಖರನನ್ನೀಗ ಗದರಬೇಕು??)

ಇಲ್ಲ ಚಲನೆಯಿಲ್ಲ ಸ್ಪಂದನೆಯ ಕುರುಹು ಇಲ್ಲ...

"ಗೌರೀ... ಒಂದು ಸಾರಿ ಇಲ್ನೋಡು ಗೌರಿ... ಇದೋ ಒಂದಾದರೂ ಮಾತನ್ನಾಡು ಗೌರೀ..."

(ಏನು? ಇದು ನನ್ನ ದನಿಯೇ?!)

ಊಹುಂ.

ಇಲ್ಲ,

ಮುಂದೆ ಮಾತಿಲ್ಲ.

ಏನೂ ಮಾಡಲೂ ತೋಚಲಿಲ್ಲ...

ನನ್ನ ಮೈಯಲ್ಲಿ ಚಿಟು ಚಿಟು ಎಂದು ಚುಚ್ಚಲಾರಂಭಿಸಿತು, ವಿಚಿತ್ರವಾಗಿ.

ಅತ್ತ ಕಡೆಯ ಓಣಿಯಿಂದ ಯಾರೋ ಕೆಮ್ಮುತ್ತ ಬರುವ ಸೂಚನೆ ಅವಗಾಹನೆಗೆ ಬಂದಿತು. ವಿಧಿಯಿಲ್ಲದೆ -

"ಹೋಗ್ತೀನಿ, ಗೌ...ರೀ..."

- ಎಂದವನೇ, ಬೆನ್ನು ಮಾಡಿ, ದಾಪುಗಾಲು ಹಾಕಿದೆ.

ಬೇವಿನ ಕಟ್ಟೆ ದಾಟಿದೆ.

ಆದರೆ,

ತಿರುಗಿ ಯಾವುದೋ ಆಶೆಯ ಹಸ್ತ ನನ್ನ ಕತ್ತನ್ನತ್ತ ಹೊರಳಿಸಿತು -

ನೋಡಿದೆ -

ಆ ಹೆಂಗಸು (ನನ್ನ ಗೌರಿಯೇ??) ಮುಖವನ್ನು ಸೆರಗಿನಿಂದ ಮುಚ್ಚಿಕೊಂಡಿದ್ದಳು!

ವೀರಭದ್ರ ಅವರ ಅನಾಥ ಪಕ್ಷಿಯ ಕಲರವ ಕಥೆಯು ಅರ್ಥಪೂರ್ಣ ಕಥೆಯಾಗಿದ್ದು ಅವರ ಕಥನದ ಸಾಮರ್ಥ್ಯವನ್ನು ಪ್ರಕಟಪಡಿಸುವ ಉತ್ತಮ ಕಥೆಯಾಗಿದೆ.

## ಸಿದ್ದೇಶ್ವರ ಗುಹೆ

ವೀರಭದ್ರ ಅವರ ಈ ಕಥೆಯು ಸಂತನೊಬ್ಬನ ಅಲೌಕಿಕ ಶಕ್ತಿಗಳನ್ನು ಕುರಿತು ಹೇಳುವ ಕತೆಯಾಗಿದೆ. ಕಥೆಯಲ್ಲಿ ಬರುವ ಸಿದ್ದೇಶ್ವರನು ಲೌಕಿಕ ಜಗತ್ತಿನ ನಶ್ವರತೆಯನ್ನು ಸಾರುವ ಸಂತನಾಗಿದ್ದನು. ಅವನೊಂದಿಗೆ ಆಧ್ಯಾತ್ಮಿಕ ಸಂಪರ್ಕ ಬೆಳೆಸಿದ್ದ ಮುಸ್ಲಿಂ ಸೂಫಿ ಸಂತನೊಬ್ಬನ ವಿವರವೂ ಈ ಕಥೆಯಲ್ಲಿದೆ. ಹಿಂದೂ ಮುಸ್ಲಿಂ ಸಮಾನ ಧಾರ್ಮಿಕ ಆಶಯಗಳನ್ನು, ಅನುಭಾವದ ಅಂಶಗಳನ್ನು ಒಳಗೊಂಡಂತೆ ಇರುವ ತಾತ್ವಿಕ ಸಂಬಂಧವನ್ನೂ ಸೂಚ್ಯವಾಗಿ ಕಥೆಯಲ್ಲಿ ಪ್ರಕಟಪಡಿಸಲಾಗಿದೆ.

ಒಂದು ದಿನ ಕಂತೆ ಭಿಕ್ಷೆ ಮಾಡಿಕೊಂಡು ಗವಿಗೆ ಹಿಂತಿರುಗಿ ಬಂದಾಗ, ಅಲ್ಲೊಬ್ಬ ಫಕೀರ ಎಚ್ಚರ ತಪ್ಪಿ ಬಿದ್ದಿರುವುದನ್ನು ನೋಡಿದ. ಓಡಿ ಹೋಗಿ, ಹಣಮುಟ್ಟಿ ನೋಡಿದ. ಮೈ ಕೈ ಸವರಾಡಿದರೆ ಕಾದ ಹೆಂಚಿನ ಮೇಲೆ ಕೈ ಸವರಾಡಿತು... ಶಿವನೆ ಶಿವನೆ ಎನ್ನುತ್ತ ಬೆಟ್ಟದ ಮೇಲೆ ಸರ ಸರ ಹತ್ತಿ ಅಂತೆಯೇ ಕೆಳಗಿಳಿದು ಬಂದ. ಕೆಳಗಿಳಿದು ಬಂದಾಗ, ಕೈಯಲ್ಲಿ ಹಸುರಿತ್ತು, ಮೂಲಿಕೆಯಿತ್ತು.

ಫಕೀರ ದಿನಗಳುರುಳಿದಂತೆಲ್ಲಾ ಗುಣಮುಖವಾಗತೊಡಗಿದ. ಗುಣಮುಖವಾದಂತೆಲ್ಲಾ ಇಬ್ಬರಲ್ಲಿಯೂ ಆತ್ಮೀಯತೆ ಪಕ್ವವಾಗತೊಡಗಿತು. ಬರುಬರುತ್ತಾ ಇಬ್ಬರಲ್ಲಿಯೂ ಭೇದ ಭಾವವೇ ಇಲ್ಲದಂತಾಯಿತು. ಒಂದೇ ಎಲೆಯಲ್ಲಿ ಊಟ, ಒಂದೇ ಕೃಷ್ಣಾಜಿನದ ಮೇಲೆ ನಿದ್ರೆಯೆಂಬಷ್ಟರ ಮಟ್ಟಿಗೆ ಅವರ ಆತ್ಮಗಳು ಒಂದಾಗಿದ್ದವು. ಆದರೆ ಅವರಲ್ಲಿ ಯಾರೊಬ್ಬರಿಗೂ ಪಕ್ಕದಲ್ಲಿರುವ 'ಗುಪ್ತ ಗುಹೆ', 'ಗುಪ್ತದಾರಿ'ಗಳ ವಿಷಯವೇ ತಿಳಿದಿರಲಿಲ್ಲ...

ಫಕೀರ-ಮುಸಲ್ಮಾನ ಸಾಧು. ಆತ ಹೆಚ್ಚಾಗಿ ಬೆಟ್ಟದ ಮೇಲೆ ಒಂದು ಬಂಡೆಯ ನೆರಳಿನಲ್ಲಿರುತ್ತಿದ್ದ. ಇನ್ನೊಬ್ಬ ಸಾಧು ಕೆಳಗಡೆ ಗವಿಯಲ್ಲಿರುತ್ತಿದ್ದ. ಅವರಿಗೆ ಗಾಳಿ, ಮಳೆ, ಚಳಿಗಳ ಬಾಧೆಯ ಪರಿವೆಯೇ ಇರಲಿಲ್ಲ. ಸಿಕ್ಕಿದಾಗ ಸಿಕ್ಕಿದಷ್ಟು ಸ್ವೀಕರಿಸಿ, ಸಂತೃಪ್ತರಾಗಿರುತ್ತಿದ್ದರು...

ಆದರೆ ಪ್ರತಿ ನಿತ್ಯ ಸಮರಾತ್ರಿಯಲ್ಲಿ, ಎಡಗಡೆಯಲ್ಲಿರುವ ಬೆಟ್ಟದ ಎದೆಯಿಂದಲೋ ಎಂಬಂತೆ - ಗಾಳಿಯ ತರಂಗಗಳ ಮೇಲೆ, ಆ ಬೆಟ್ಟದ ಕಡೆಯಿಂದ ಎಂಥದೋ ಧ್ವನಿ ಹೊರಟು, ಬರುಬರುತ್ತ ತಾನಿರುವ ಕೆಳಭಾಗದ ತಾಣದಿಂದ - 'ಬಾ, ಬಾ, ಬಾ,' - ಎಂದು ಸದ್ದಾಗುತ್ತಿರುವುದನ್ನು ಕೇಳುತ್ತಿದ್ದ ಸಾಧು.

ಯಾರು ಕರೆಯುತ್ತಿರುವುದು

ಎಲ್ಲಿಗೆ ಬಾ ಎಂದು ಕೂಗುತ್ತಿರುವುದು

ಅಲ್ಲೇನಿದೆ ಅಲ್ಲೇನಿದೆ ಅಲ್ಲೇನಿದೆ ಎಂದು ಹೃದಯದ ಬಡಿತಕ್ಕೊಂದು ಸಲ ಹೀಗೆನ್ನಿಸಿ, ಕುತೂಹಲ ಕೆರಳಿ, ಒಂದು ದಿನ, ಸಮರಾತ್ರಿಯಲ್ಲಿ ಬಾ, ಬಾ, ಬಾ, ಎಂದು ಸದ್ದಾಗುತ್ತಲೆ, ತಟಕ್ಕನೆ ಎದ್ದು, ಗವಿಯಿಂದ ಹೊರಬಂದು, ಎಡಪಕ್ಕದಲ್ಲಿ ಸದ್ದಾಗುತ್ತಿರುವುದನ್ನು ಮನಗಂಡು, ಅದನ್ನೇ ಹಿಂಬಾಲಿಸಿದ. ಆ ಸಾಧು... ಹಿಂಬಾಲಿಸುತ್ತ ತಡಕಾಡುತ್ತ, ಕತ್ತಲಲ್ಲಿ ಎಡವುತ್ತ ಕೊನೆಗೆ ಗುಪ್ತ ಗುಹೆ ಗೆ ನುಗ್ಗಿದ - ನುಗ್ಗಿದ ಮೇಲೆ, ಹೆಜ್ಜೆ ಇಟ್ಟಂತೆಲ್ಲಾ ಆ ಧ್ವನಿ, ವಿಚಿತ್ರ ಧ್ವನಿ ಹಿಂದಕ್ಕೆ ಹಿಂದು ಹಿಂದಕ್ಕೆ ಸರಿಯುತ್ತಿತ್ತು. ಏನೋ ವಿಚಿತ್ರ ಆದರೂ ಎದೆಯನ್ನು ಧೈರ್ಯದಿಂದ ಹೊಸೆದು, ಮುನ್ನುಗ್ಗಿದದ, ಮುಂದುವರೆದ... ಹಾಗೆಯೇ, ಹಾಗೆಯೇ ಧ್ವನಿಯನ್ನೇ ಹಿಂಬಾಲಿಸಿದ, ಹಿಂಬಾಲಿಸಿ ಹೊರಟೇ ಹೋಗಿ ಬಿಟ್ಟ... ಅಷ್ಟೇ.

ಅದಾದ ಮೇಲೆ ಆ ಫಕೀರ ಸಾಧುವನ್ನು ಕಾಣದೆ ಅಗಲಿಕೆಯ ನೋವಿನಿಂದ ಸಾವನ್ನಪ್ಪುತ್ತಾನೆ. ಗುಹೆಯೊಳಗೆ ಹೋದ ಇನ್ನೊಬ್ಬ ಸಾಧು ತುಂಬಾ ದಿನಗಳವರೆಗೆ ಕಾಣದಾಗಲು ಆ ಸಾಧುವಿನ ಸುತ್ತ ಹಲವಾರು ಕಥೆಗಳು ಹುಟ್ಟಿಕೊಂಡವು. ಯಾರೂ ಪ್ರವೇಶಿಸಲಾರದಂತಹ ಗುಹೆಯೊಳಗಡೆ ಹೋಗಿ ಸಾಧು ಬಂಗಾರವನ್ನು ತಯಾರಿಸುತ್ತಿದ್ದಾನೆಂದು ಮಾತಾಡಿಕೊಂಡರು. ಒಂದ ದಿನ ರಾತ್ರಿ ಮೂರು ಜನ ಸಾಧುವಿನ ಗುಟ್ಟನ್ನು ಬಯಲು ಮಾಡಲು ಮತ್ತು ಬಂಗಾರವನ್ನು ಪಡೆಯುವ ಆಶೆಯಿಂದ ಪಂಜುಗಳನ್ನು ಹಿಡಿದು ಗುಹೆಯನ್ನು ಪ್ರವೇಶಿಸಿದರು. ಅವರ ಮೂವರ ಮನದಲ್ಲಿ ಬಂಗಾರ ಬಂಗಾರವೆಂಬ ಭಾವನೆಯನ್ನು ಬಲವಾಗಿ ತಳೆದಿದ್ದರಿಂದ ಆ ಗುಹೆಯೊಳಗಡೆ ಬಂಗಾರದ ರಾಶಿಯೇ ಇತ್ತು.

ನೋಡಿದರು - ಎದುರಿಗೆ ಘರ್ಜಿಸುತ್ತಿರುವ ವ್ಯಾಘ್ರವನ್ನು! ಸಿದ್ದಪ್ಪ ಸಾಧುವನ್ನು!

ಕೋಟಿ ಸೂರ್ಯರನ್ನು ಒಮ್ಮೆಗೇ ಕಂಡಂತಾಯಿತು. ಕನಸಿನಲ್ಲಿ ಬೆದರಿದ ಮಕ್ಕಳಂತೆ, ಥರಥರನೆ ನಡುಗಲಾರಂಭಿಸಿದರು.

'ಬರಬಾರದಾಗಿತ್ತು. ಬಂದಿದ್ದೀರಿ. ಊಂ, ತೆಗೆದುಕೊಂಡು ಹೋಗಿ ನೀವು ಬಯಸಿದ ಬಂಗಾರವನ್ನು' ಎಂದ.

'ಮಹಾಸ್ವಾಮಿ ನಮ್ಮದು ತಪ್ಪಾಯ್ತು, ಕ್ಷಮಿಸು ಸಿದ್ದೇಶಾ, ನಮ್ತಂದೇ,' ಎಂದು ಮೂವರಲ್ಲಿ ಒಬ್ಬರು ಪಶ್ಚಾತ್ತಾಪ ಪಟ್ಟರೆ ಇನ್ನಿಬ್ಬರಿಗೆ ಇನ್ನೂ ಬಂಗಾರದ ಮೇಲೆ ಆಶೆ ಹೋಗಿರಲಿಲ್ಲ. 'ಹೂಂ, ನಿಮಗೆ ಬಂಗಾರ ಬೇಕಾದರೆ ಹೊತ್ತುಕೊಂಡು ಹೋಗಿರಿ' ಎಂದು ದಿಟ್ಟಿಸಿದ. ಆ ನೋಟದ ಬಿಸಿ ಉಳಿದಿಬ್ಬರ ಧೈರ್ಯವನ್ನು ಕಸಿಯಿತು.

ಸಿದ್ದಪ್ಪ ಸಾಧು ನಗುತ್ತ ಹೋಗಿ ನಿಮಗೆ ದಾರಿ ತೋರಿಸುತ್ತೇನೆ. ಆದರೆ ಹಳ್ಳಿಯಲ್ಲಿ ಯಾರಿಗೂ ಬಾಯಿ ಬಿಡಬೇಡಿ ಎಂದು ಹೇಳಿದ. ಸಿದ್ದಪ್ಪ ಅವರಿಗೆ ಬೆರಳೆತ್ತಿ ತೋರಿಸಿದನಂತೆ. ಆ ತೋರು ಬೆರಳಿನೊಳಗಿನಿಂದ ಬೆಳಕಿನ ಕಿರಣವೊಂದು ಹೊರ ಹರಿದು ಬಂದು, ಒಂದು ಕಡೆ ನೆಟ್ಟಗೆ ನಿಂತು, ಕೂಡಲೆ ಮುದ್ದೆಯಾಗಿ ಬೆಳಕು ತೋರುತ್ತ ಮುಂದುವರೆಯತೊಡಗಿತಂತೆ. ಹಾಗೆ ಗುಹೆಯೊಳಗಡೆಯಿಂದ ಜೀವಂತವಾಗಿ ಹೊರಬಂದವರು ಒಬ್ಬರು ಮಾತ್ರ ಊರಿಗೆ ಹಿಂದಿರುಗಲು ಸಾಧ್ಯವಾಯಿತಂತೆ. ಹಾಗೆ ಹಿಂದಿರುಗಿದವನಿಗೆ ಮೂರು ದಿನಗಳ ತನಕವೂ ಎಳ್ಳು ಹಾಕಿದರೆ ಸಿಡಿಯುವಷ್ಟು ತಾಪದಿಂದ ತಪ್ತನಾಗಿ ಬಿದ್ದಿದ್ದನಂತೆ. ಅವನು ಚೇತರಿಸಿಕೊಂಡಾದ ನಂತರ ಗೌಡನ ಬಳಿಗೆ ಹೋಗಿ ದೇವಾಲಯವನ್ನು ಕಟ್ಟಿಸಬೇಕೆಂದು ಅರಿಕೆ ಮಾಡಿಕೊಂಡನಂತೆ. ಆ ಗೌಡನಿಗೂ ಕನಸು ಬಿದ್ದಿತ್ತಂತೆ. ಒಂದು ಶುಭ ದಿನ, ಹಳ್ಳಿಯೆಲ್ಲವೂ ಗವಿಗೆ ಬಂದಾಗ, ದೊಡ್ಡ ಗುಹೆಯಲ್ಲಿ ಶಿವಲಿಂಗವೊಂದು ಮೂಡಿರುವುದನ್ನು ಕಂಡಿತು. ಈತನನ್ನು ಸಿದ್ದೇಶ ಎಂದು ಹೆಸರಿಸಲಾಯಿತು. ಪ್ರತಿ ವರ್ಷ ಬೇಸಿಗೆಯಲ್ಲಿ ಜಾತ್ರೆಯಾಗುತ್ತದೆ. ಹಾಗೆಯೇ ಮುಸ್ಲಿಂ ಸಂತನ ಗೋರಿಗೂ ಉರುಸ್ ಆಚರಣೆ ಮಾಡಲಾಗುತ್ತದೆ.

ಹೀಗೆ ಪ್ರಾದೇಶಿಕವಾಗಿ ಆ ಭಾಗದಲ್ಲಿ ಪ್ರಚಲಿತದಲ್ಲಿರುವ ಜನಪದ ಐತಿಹ್ಯವೊಂದನ್ನು ವಸ್ತುವನ್ನಾಗಿಸಿಕೊಂಡು ವೀರಭದ್ರ ಅವರು ಈ ಮೇಲಿನ ಕಥೆಯನ್ನು ರಚಿಸಿದ್ದಾರೆ.

**ಹೆಬ್ಬೆರಳು ಕೂಡಿರಲಿಲ್ಲ**

ವೀರಭದ್ರ ಅವರ ಸಮಗ್ರ ಕಥಾಸಂಕಲನದೊಳಗೆ ಸೇರದ ಇದೇ ವರ್ಷದ ಜೂನ್ ತಿಂಗಳಲ್ಲಿ ಪ್ರಜಾವಾಣಿಯ ಸಾಪ್ತಾಹಿಕ ಪುರವಣಿಯಲ್ಲಿ ಪ್ರಕಟಗೊಂಡ ಕಥೆಯಾಗಿದೆ.

> **"ನಾವಿರುವ ಕಡೆ ನಮಗೆ ಬೇಕಾದ್ದು ದೊರೆಯದಿದ್ದಾಗ ಅದಿರುವ ಸ್ಥಳವನ್ನು ಹುಡುಕಿಕೊಂಡು ಹೋಗುವುದು ಅನಾದಿಕಾಲದಿಂದಲೂ ಆದಿ ಮಾನವನಿಂದಲೂ ಅನೂಚನವಾಗಿ ನಡೆದುಕೊಂಡು ಬಂದಿದೆಯಷ್ಟೆ.**

**ಹೊರಟೆ ಅಚ್ಚ ಬೆಳದಿಂಗಳು, ಬೆಸಿಗೆಯ ರಾತ್ರಿಯ ಬೆಳದಿಂಗಳು ಮಣ್ಣಿನ**
**ಮಾಳಿಗೆಯ ಮೇಲೆ ಅಂಗಾತ ಮಲಗಿ ಜೋಳದ ಹಿಟ್ಟಿನಂತೆ ತಾನೇ ತಾನಾಗಿ,**
**ಎಮ್ಮೆಯ ಹಾಲಿನಂತೆ ಬೆಳ್ಳಂಬೆಳದಿಂಗಳಲ್ಲಿ ಮೀಯಲು ಬಳ್ಳಾರಿಯ ಹತ್ತಿರವಿರುವ**
**ನನ್ನ ತಂಗಿಯ ಊರು, ಹಗರಿ ಹೊಳೆ ಸಾಲಿನ ಮೋಕಾ ಗ್ರಾಮಕ್ಕೆ ಹೊರಟೆ"**

ಎಂಬುದಾಗಿ ಕಥೆ ಆರಂಭಿಸುವ ಲೇಖಕರು ಅಧ್ಭುತವಾದ ಕಥನವೊಂದನ್ನು ಬಿಚ್ಚಿಡುತ್ತಾರೆ. ಇದು ಹೆಣ್ಣು ಗಂಡಿನ ಪ್ರೇಮದ ಕಥೆಯಾಗಿದ್ದು, ಬಳ್ಳಾರಿಯ ಸುತ್ತಮುತ್ತಲಿನ ಆಡುನುಡಿ, ನುಡಿಗಟ್ಟುಗಳನ್ನೊಳಗೊಂಡಂತೆ ಅಲ್ಲಿನ ಬದುಕಿನ ನೈಜ ಚಿತ್ರಣವನ್ನು ನೀಡುತ್ತಾರೆ.

ನಿರೂಪಕರು ತಮ್ಮ ತಂಗಿಯಿಂದ ಕೇಳಿದ್ದ ತುಂಬಾ ಹಿಂದೆ ನಡೆದ ಹೆಣ್ಣು ಗಂಡಿನ ಮಧ್ಯದ ಪ್ರೇಮ ಕಥೆಯನ್ನು ನಿರೂಪಿಸುವ ಮೊದಲು ಹೆಣ್ಣಿನ ಕುರಿತಾದ ಪರಿಕಲ್ಪನೆಯನ್ನು ತಮ್ಮ ಕನಸು ಮತ್ತೆ ಅರೆವಚ್ಚರಗಳ ದೀಪ್ತಿಯಲ್ಲಿ ವಿವರಿಸುತ್ತಾರೆ. ಇದರ ನಿರೂಪಣೆ ಆಡಂ ಮತ್ತು ಈವ್‌ರ ಕುರಿತಾದಂತೆ ಎಂದು ಅನ್ನಿಸದೇ ಇರದು. ಇದಾದ ನಂತರವೇ ನಿರೂಪಕರು ತಮ್ಮ ತಂಗಿಯು ಅರ್ಧ ಹೇಳಿ ಇನ್ನರ್ಧ ಉಳಿಸಿದ್ದ ಕಥೆಯನ್ನು ನಿರೂಪಿಸತೊಡಗುತ್ತಾರೆ.

"ಈ ಪ್ರಸಂಗದ ನಾಯಕ ನಾಯಕಿಯರ ಮನೆಗಳು ಅಕ್ಕಪಕ್ಕ. ನಾಯಕಿ ಎಂಟು ವರ್ಷ ಚಿಕ್ಕವಳು. ಎರಡು ಮನೆಯವರ ಮನಗಳು ಅಕ್ಕರೆ, ಮಮತೆಗಳಲ್ಲಿ ಬೆಸುಗೆಗೊಂಡಿದ್ದವು. ನಾಯಕಿ ಮಾಲಿಂಗಿ ಹುಟ್ಟುತ್ತಲೇ ಆ ಮನೆಯವರು, ಓಣಿಯವರು- 'ಲೋ ಚನ್ನಬಸ್ಯಾ ನಿನಗೆ ಹೆಂಡ್ತಿ ಹುಟ್ಯಾಳ ನೋಡೋ...' ಎಳೆನಾಯಕ ತೆಳುವಾಗಿ ನಾಚಿದ.

ನಾಲ್ಕಾರು ವರ್ಷದ ಮಾಲಿಂಗಿ ತನ್ನ ಮನೆಯಲ್ಲಿ ಸ್ನಾನ ಮಾಡಿದ ಮೇಲೆ ಚೆನ್ನಬಸವನ ಮನೆಗೆ ಮರಿ ಜಿಂಕೆಯಂತೆ ಓಡೋಡಿ ಬಂದು ಅವನ ಕೈಯಲ್ಲೇ ಲಂಗ ಜಂಪರ್ ಹಾಕಿಸಿಕೊಳ್ಳುತ್ತಿದ್ದಳು. ಆಟಪಾಠಗಳಲ್ಲಿ ಕೂಡಿಯೇ ಇರುತ್ತಿದ್ದರು. ಐದನೇ ತರಗತಿ ಮುಗಿ ಮುಗಿಯುತ್ತಿರುವಂತೆಯೇ 'ಹೆಣ್ಣು ಹುಡುಗಿಗ್ಯಾಕೆ ಓದು ಎಷ್ಟು ಓದಿದ್ರೂ ಒಲೆ ಊದೋದು ತಪ್ಪಂಗಿಲ್ಲ! ಶಾಲೆ ಬಿಟ್ಟಳಾದರೂ ಚೆನ್ನಬಸವ ಎಸ್. ಎಸ್. ಎಲ್. ಸಿ ವರೆಗೆ ಓದಿದ. ಅಷ್ಟು ವರ್ಷ ಅವನು ಅಭ್ಯಾಸ ಮಾಡಿಕೊಳ್ಳುತ್ತಿದ್ದಾಗ ಇವಳು ಮೌನವಾಗಿ ಅವನ ಪಕ್ಕದಲ್ಲೇ ಅವನು ಓದುವುದನ್ನು ಬರೆಯುವುದನ್ನು ನೋಡುತ್ತಾ ಕುಳಿತಿರುತ್ತಿದ್ದಳು.

ಹೀಗೆ ಇದ್ದ ಇವರ ಒಡನಾಟ ಅವರು ಯೌವನಕ್ಕೆ ಕಾಲಿಡುತ್ತಿದ್ದಂತೆಯೇ "ಆ ಮನೆಯ ದಾಯಾದಿ ಈ ಮನೆಗೆ ಬಂದು ಗುಟ್ಟಾಗಿ... ಅವರ ಪೂರ್ವಿಕರ ಪೈಕಿ ಒಬ್ಬಾತ ಗಂಡ ಸತ್ತೋಳ್ನ 'ಉಡಿಕೆ' ಮಾಡಿಕೊಂಡಿದ್ದ. ಅಂಥೋರ ಮನೆ ಕನ್ಯಾನ ತಂದುಕೊಳ್ತೀರೇನ್ರಪ್ಪಾ..." ಎಂದು ಬೆಂಕಿ ಹಾಕಿದ. ಇದ್ಯಾವುದೂ ಗೊತ್ತಿಲ್ಲದ ನಾಯಕ ನಾಯಕಿರ ನಡುವೆ... ಚನ್‌ಬಸವ ಮಾವಾ.. ಹತ್ತಿ ಬಿಡಿಸೋಕೆ ಹೋದಾಗ ನನ್ ಗೆಣೆಕಾರ್ತೀರು... ನೀನು ನನ್ನ ಮದುವೇನೇ ಆಗಾಂಗಿಲ್ಲ ಅಂತ ಅಂತ್ಯಾರೆ. ಹೌದೇನು ಮಾವಾ...?' ಎಂದು ಕೇಳುತ್ತಾಳೆ. ಅದಕ್ಕೆ ಅವನು 'ಹೌದು ನಾನು ಆಗಂಗಿಲ್ಲ' ಎಂದೆನ್ನುತ್ತಾನೆ. 'ಹೌದಾ ಇದೇ ಮಾತಾ ನೋಡ್ತೀನಿ ನೀನು ಅದೆಂಗ ನನ್ನ ಮಾಡ್ಕೊಳ್ಳಂಗಿಲ್ಲೋ ನಾನು ನೋಡ್ತೀನಿ'. ಎಂದು ಸವಾಲೆಸೆಯುತ್ತಾಳೆ.

ಹೀಗಿರುತ್ತಿರುವಾಗ ಒಂದು ದಿನ ಮಧ್ಯಾಹ್ನ - ಮನೆ ಮನೆಗಳಲ್ಲಿ ಮೌನವೇ ಮೌನವಾಗಿದ್ದಾಗ, ನಾಯಕ ಜೋಳ ಒಣಗಿಸ್ತಾ ಜಗಲಿ ಮ್ಯಾಲೆ ಕೂತಿದ್ದಾಗ, ತನ್ನ ಅಂಗಳದಲ್ಲಿ ನಾಯಕಿ ಸೆಗಣಿ ತುಂಬಿದ ಮಂಕರೀನ ಎತ್ತಿಕೊಳ್ಳಲಾರದವಳಂತೆ... 'ಓ ಮಾವ್ನೋ.. ಒಂದು ಪಟಗು ಈ ಪುಟ್ಟಿ ಎತ್ತಿ ತಲೆ ಮೇಲಿಡಬಾರೋ...' ಎಂದು ಗೋಗರೆಯುತ್ತಾ ಕರೆದಾಗ ಅವನ ಕೈಗಳಿಗೆ ಸಗಣಿ ಅಂಟಿಕೊಂಡರೂ ಮುಜುಗುರ ಪಟ್ಟುಕೊಳ್ಳದೆ

ಮಂಕರಿಯನ್ನು ಎತ್ತಿ ನಾಯಕಿಯ ತಲೆಯ ಮೇಲೆ ಇಡಲು ಹೋದಾಗ... ಏನಾಯಿತೋ... ನಾಯಕನಿಗೆ ಗೊತ್ತಾಗುವುದಕ್ಕಿಂತ ಮುಂಚೆಯೇ...

'ಅವ್ವಾ... ಅವ್ವೋ.. ಅಯ್ಯಯ್ಯಪ್ಪೋ ಈ ಚೆಂಬಸ್ವ ನನ್ ಎದೆಮ್ಯಾಕೆ ಕೈ ಹಾಕಿ ಏನೋ ಮಾಡಿಬುಟ್ನಮ್ಮೋ...' ಎಂದು ನಾಯಕಿ ತನ್ನ ಕುಬುಸದ ಮೇಲೆ ಸೆಗಣಿ ಅಂಟಿದ ಎರಡು ಅಂಗೈಗಳ ಗುರುತು ನಿರ್ಭಿಡೆಯಿಂದ ತೋರಿಸುತ್ತ ಗೋಳೋ ಎಂದಳು.

ಕಡೆಗೆ ಪಂಚಾಯ್ತಿ ನಡೆಯಿತು. ಆ ಪಂಚಾಯ್ತಿಯಲ್ಲಿ ಇಂಥವರನ್ನು ಸುಮ್ಮನೆ ಬಿಡಬಾರದೆಂದೂ ಅವನನ್ನು ಕತ್ತೆಯ ಮೇಲೆ ಕೂರಿಸಿ ಊರೆಲ್ಲಾ ಮೆರವಣಿಗೆ ಮಾಡಬೇಕೆಂದೂ ಚರ್ಚಿಸತೊಡಗಿದರು. ಈ ನಡುವೆ ಬಸವಿ ಮಲ್ಲಕ್ಕ ತಾನು ಮಧ್ಯ ಪ್ರವೇಶಿಸಿ ತನಗೆ ಆ ಕುಪ್ಪಸ ಕೊಟ್ಟರೆ ನೋಡಿ ಹೇಳುತ್ತೇನೆ ಎಂದಳು. ಮಾಲಿಂಗಿಯನ್ನು ಪಕ್ಕಕ್ಕೆ ಕರೆದೊಯ್ದು 'ಏನೇ ಮಾಲಿಂಗಿ ನೀ ಹಿಂಗ್ ಮಾಡಬೌದಾ...' ಎಂದು ಕೇಳಿದಳು. ಅದಕ್ಕೆ ನಾ ಏನು ಮಾಡೀನಿ ಎಂದ ತಿರುಗಿ ಪ್ರಶ್ನಿಸಿದಾಗ ಬಸವಿ ಮಲ್ಲಕ್ಕ ತನ್ನ ಎರಡೂ ಅಂಗೈಗಳನ್ನು ಮಾಲಿಂಗಿಯ ಜೋಡಿ ಮಾವಿನ ಹಣ್ಣುಗಳಂಥ ಮೊಲೆಗಳ ಮೇಲೆ ಒತ್ತಿದಳು. ಸಾಕ್ಷಿಗೆ ತಂದ ಕುಬಸದ ಮೇಲಿನ ಅಂಗೈ ಗುರುತುಗಳನ್ನು ತೋರಿಸಿ.

'ಹೆಬ್ಬೆರಳು ಕೂಡಿವೆ ಏನೇ'

ಮತ್ತೆ ತಟ್ಟನೆ ಮಾಲಿಂಗಿಯ ಎರಡೂ ಕೈಗಳನ್ನು ಮುಂದಕ್ಕೆ ಸೆಳೆದು ಅಂಗೈಗಳನ್ನು ಬಿಡಿಸಿ ಅವುಗಳನ್ನು ಅವಳದೇ ಎದೆಯ ಮೇಲೆ ಇಟ್ಟು ಒತ್ತಿದಳು.

'ಇಗೋ ಇಲ್ನೋಡು ನಿನ್ನ ಬೆರಳುಗಳು ಕೂಡಿಕೊಂಡಿಲ್ಲೇನು'

ನ್ಯಾ ಪಂಚಾಯ್ತಿ ಬಗೆಹರಿಯಿತು. ಚೆನ್ನಬಸವ, ಅವನ ಮನೆಯವರು, ಎಲ್ಲರೂ ನಿರುಮ್ಮಳಾದರು.

ನಂತರ ಮಾಲಿಂಗಿ ಮನೆಯ ಹೊಸ್ತಿಲನ್ನು ದಾಟಿ ಹೊರಗೆ ಬರಲೇ ಇಲ್ಲ. ಚೆನ್ನಬಸವ ಮದುವೆಯಾಗುತ್ತೇನೆಂದು ಅದೆಷ್ಟು ಪರಿಪರಿಯಾಗಿ ವಿನಂತಿಸಿಕೊಂಡರೂ ಅವಳು ಒಪ್ಪದೆ ಇರುವುದು ಕೊನೆಗೆ ನಾ, ಮದುವೇನೆ ಆಗಂಗಿಲ್ಲ ನಾ ಹಿಂಗೇ ಇದ್ದುಬಿಡ್ತೀನಿ...ಮುದ್ದು ಮಲ್ಲೇಶ್ವರನ ಗುಡೀಲಿ ಸೇವೆ ಮಾಡ್ತಾ ಇದ್ದು ಬಿಡ್ತೀನಿ... ಎಂದು ಒಂದು ರಾತ್ರಿ ಮನೆ ಬಿಟ್ಟು ಹೊರಟು ಹೋದಳು. ಅದಾದ ಸ್ವಲ್ಪ ದಿನಗಳ ನಂತರ ಚೆನ್ನಬಸವನೂ ಕಂಡುಬರಲಿಲ್ಲ.

ಎಷ್ಟೋ ಕಾಲವಾದ ಮೇಲೆ ಒಂದು ದಿನ ಕುರುಬರ ಹುಡುಗ ತನ್ನ ಮೇಕೆಯೊಂದು ಆ ಅಡವಿಯೊಳಕ್ಕೆ ಮೇಯುತ್ತ ಹೋದುದನ್ನು ಹುಡುಕುತ್ತ ಹುಡುಕುತ್ತ ನಟ್ಟಡವಿಗೆ ಹೋದನಂತೆ. ನೋಡ್ತಾನಂತೆ ಎರಡು ಎಲುಬು ಗೂಡಾಟ ಮನುಷ್ಯರ ದೇಹಗಳು ಕಾಣಿಸಿದವಂತೆ. ಆ ಹುಡುಗ ಓಡೋಡಿ ಬಂದು ಏದುಸಿರು ಬಿಡುತ್ತ ಊರಿಗೆಲ್ಲಾ ಸುದ್ದಿ ಮುಟ್ಟಿಸಿದ. ನಂತರ ಆ ಮನೆಯವರು ಈ ಮನೆಯವರು ಅಕ್ಕಪಕ್ಕದಲ್ಲೇ ಸಮಾಧಿ ಮಾಡಿದರಂತೆ.

ಪ್ರಸ್ತುತ ಕಥೆಯಲ್ಲಿ ಹೆಣ್ಣು ಗಂಡಿನ ಪ್ರೇಮವನ್ನು ನವಿರಾಗಿ ಚಿತ್ರಿಸುತ್ತಲೇ ಹೆಣ್ಣಿಗಿರುವ ಸ್ವಾಭಿಮಾನ, ಛಲ, ಮತ್ತು ಪ್ರೀತಿಯನ್ನು ರೂಪಕ ಭಾಷೆಯಲ್ಲಿ ಅದೂ ಬಳ್ಳಾರಿಯ ಪ್ರಾದೇಶಿಕ ಬನಿಯಲ್ಲಿ ವೀರಭದ್ರ ಅವರು ನೀಡಿರುವುದು ಪ್ರಶಂಸಾರ್ಹವೆನ್ನಬಹುದು.

**ಪ್ರಾದೇಶಿಕತೆಯ ನೆಲೆಯಲ್ಲಿ ಕುಂವೀ ಅವರ ಕಥೆಗಳು**

ಕುಂವೀ ಅವರ ಕಥೆಗಳನ್ನು ವೀರಭದ್ರ ಅವರ ಕಥೆಗಳಿಗೆ ಹೋಲಿಸುವುದಾದರೆ ಈ ಕಥೆಗಳಲ್ಲಿ ವ್ಯಕ್ತಗೊಳ್ಳುವ ಪ್ರಾದೇಶಿಕತೆಗೂ ವೀರಭದ್ರ ಅವರ ಕಥೆಗಳಲ್ಲಿ ಬಿಂಬಿತವಾದ ಪ್ರಾದೇಶಿಕತೆಗೂ ಅಜಗಜಾಂತರ ವ್ಯತ್ಯಾಸವಿದೆ. ಅತಿರಂಜಿತವಾದ ಮತ್ತು ತಾನೇನೋ ಅಕ್ಷರ ಜಗತ್ತಿಗೆ ಅಧ್ಭುತವಾದುದೇನನ್ನೋ, ನಿಗೂಢವಾದುದೇನನ್ನೋ ಹೇಳುತ್ತಿದ್ದೇನೆನ್ನುವ ಉತ್ಸುಕತೆಯ ನಿಲುವಿದೆ. ಕರ್ನಾಟಕದ ಬೇರೆಡೆ ಎಲ್ಲಿಯೂ ಇಲ್ಲದ, ಅಥವಾ ದೇಶದಲ್ಲಿ ಇನ್ನೆಲ್ಲೂ ಇಲ್ಲದ ಸಂಗತಿಗಳನ್ನು ತಾನು ಹೇಳುತ್ತಿರುವೆನೆಂದೂ ಅದನ್ನು ಓದುಗರು ಅರ್ಥ ಮಾಡಿಕೊಳ್ಳಬೇಕೆಂಬ ನಿಲುವಿದೆ. ಇದು ಸೃಜನಶೀಲ ಲೇಖಕನೊಬ್ಬನ ಪ್ರಾಮಾಣಿಕತೆಯ ನಿಲುವಿನಿಂದ ಬಂದದ್ದಲ್ಲ. ಅಲ್ಲದೆ ಎಲ್ಲ ಸೃಷ್ಟಿಶೀಲತೆಗೂ ಪ್ರಾಣರೂಪವಾದ ನೈತಿಕ ಎಚ್ಚರ ಇಲ್ಲಿ ಕಾಣೆಯಾಗಿರುವುದು ಗಮನಿಸತಕ್ಕೆ ಅಂಶವಾಗಿದೆ.

**೧. ಕತ್ತಲನು ತ್ರಿಶೂಲ ಹಿಡಿದ ಪ್ರಸಂಗ**

ಪ್ರಸ್ತುತ ಕಥೆಯು ಶೋಷಣೆಯನ್ನು ವಸ್ತುವನ್ನಾಗುಳ್ಳ ನಿರೂಪಣೆಯಲ್ಲಿ ದೇವನೂರರನ್ನು ಅನುಕರಿಸಲು ಹೊರಟ ಪ್ರಯತ್ನವಾಗಿದೆ. ಇಡೀ ಕುಂವೀ ಅವರ ಕಥನದ ನೆಲೆಯೇ ದೇವನೂರರನ್ನು ಅನುಕರಿಸಿ ರೂಪಿಸಿಕೊಂಡ ಶೈಲಿಯಾಗಿದೆ. ಹೀಗೆ ಒಬ್ಬರನ್ನು ಅನುಕರಿಸುವುದು ತಪ್ಪಲ್ಲವಾದರೂ ಇಂತಹ ಅನುಕರಣೆಯು ವೈಯಕ್ತಿಕ ಪ್ರತಿಭೆ ಮತ್ತು ಪ್ರಯತ್ನಗಳ ಫಲವಾಗಿ ತನ್ನತನದ ವೈಶಿಷ್ಟ್ಯಗಳನ್ನು ಪ್ರಕಟಪಡಿಸುವಂತಿರಬೇಕು. ಶೋಷಣೆಯನ್ನು ಅದರಲ್ಲೂ ಕಲೆಯ ಚೌಕಟ್ಟಿನಲ್ಲಿ ನಿರೂಪಿಸುವಾಗ ಇರಬೇಕಾದ ಕಲಾತ್ಮಕ ಪ್ರಜ್ಞೆಯೇ ಇಲ್ಲಿ ಕಣ್ಮರೆಯಾಗಿದೆ. ಈ ಕಥೆಯಲ್ಲಿ ಬರುವ ಕತ್ತಲನ ಹೆಸರೇ 'ಅಮಾಸನ' ಹೆಸರಿನ ನೆರಳಾಗಿರುವುದನ್ನು ಗಮನಿಸಬಹುದು. ಕಥೆ ಆರಂಭವಾಗುವುದು ಹೀಗೆ –

> **ನಾಳೆ ಅಮವಾಸೆ ಐತೆ ಅನ್ನುವಾಗ ಕತ್ತಲ ಎಲ್ಡು ಮುಷ್ಠಿ ಬಾನ ಉಂಡಿದ್ದ ಅಷ್ಟೆ. ಅಮಾಸೆ ಹೋಯ್ತು. ಪಾಡ್ಯ ಬಂತು. ಒಂದಗಳೂ ಅನ್ನವಿರದ ಹೊಟ್ಟೆ ಬೆನ್ನಿಗಂಟುವುದರಲ್ಲಿತ್ತು. ತಂಬಿಗೆಗಟ್ಟಲೆ ನೀರು ಕುಡಿದ. ಗೌಡರ ಮನೆಗಳಲ್ಲಿ ಏನೇನು ಅಡಿಗೆ ಆಗ್ತಾ ಇದೆ, ಏನೇನು ಇಲ್ಲ ಅನ್ನೋದನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳತೊಡಗಿದ. ಒಣಗಿದ್ದ ನಾಲಿಗೆ ಸುತ್ತಲೂ ಯಾವುದೋ ಒಂದು ಕಮ್ಮನೆಯ ರಸ ಇಣುಕತೊಡಗಿತು. ನುಂಗೇ ನುಂಗಿದ. ಹೊಟ್ಟೆ ತುಂಬಿದಂತೆನಿಸಿತು. ಡೇಗಲು ಪ್ರಯತ್ನಿಸಿದ. ಬರಲಿಲ್ಲ. ಆಯಾಸವಾದಂತಾಯಿತು. ನಡೆಯಲಾಗದೆ ಗೋಡೆಗಾತು ನಿಂತ. ಕಣ್ಣಿಗೆ ಚಕ್ರಬಂತು. ಮರಗಿಡ, ಹಟ್ಟಿಗಳೆಲ್ಲ ಗರ ಗರ ತಿರುಗಿದಂತಾದವು. ಮತ್ತೆ ನಿಸೂರಾದ. ಹಟ್ಟಿಯೊಳಗೆ ಮುದುಕಿ ಸುಂಕುಲಿ ಬ್ಯಾನೆ ಬ್ಯಾಸರಿಕೆಗೆ ಮಗ್ಗುಲಾಗಿ ಬಿದ್ದಿತ್ತು. ಎಂದೋ ಮಾಡಿದ ಅಡಿಗೆಯ ಗಡಿಗೆಗಳನ್ನು ತೊಳೆದಿರಲಿಲ. ಕರುಕು ವಾಸನೆ ಮೂಗಿಗೆ ರಾಚುತ್ತಿತ್ತು. ಹೊತ್ತು ಸಾಯುವುದರೊಳಗಾಗಿ ಒಂದು ಹಿಡಿ ಬಾನ ಅವಳ ವಡಲಿಗೆ ಬೀಳದಿದ್ದರೆ ಅವಳು ಕೈ ಬಿಡಬಹುದೆನಿಸಿತು. ಕತ್ತಲಗೆ. ಮತ್ತೆ ಕಣ್ಣಿಗೆ ಚಕ್ಕ, ಮತ್ತೆ ಮರಗಿಡ ಹಟ್ಟಿಗಳೆಲ್ಲ ತಿರುಗಿದವು. ಈಗ ಏನ್ ಮಾಡೋದು? ಯಾರ್‍ನ ಕೇಳೋದು, ವಟ್ಟೆ ಅಸ್ತದೆ ಅನ್ನೋದೆ ತಪ್ಪು, ಯಾರ ವಟ್ಟೆಗೂ ಯಾರೂ ಬಾದ್ಯಸ್ತರಲ್ಲ. ಹೀಗೆ ತಲೆಯೊಳಗೆ ಪ್ಯಾಟೆ ಸೇರಿದ ಮಗಳು ದ್ಯಾಮಿಯನ್ನು ನೆನಪಿಸಿಕೊಂಡೆ. ಎಣ್ಣೆ, ಜಿಡ್ಡು ಪದಾರ್ಥ ತಿಂಬಹುದಂತ ಅದೇ ಪ್ಯಾಟೆಯ ಚಾದಂಗಡಿಯೊಳಗೆ ಎಂಜಲು ಪಾತ್ರೆ ಪಗಡ ತೊಳೆಯುತ್ತಿರುವ ಮಗ ಸಿದ್ದನನ್ನು ನೆನಸಿಕೊಂಡ. ಕಣ್ಣೊಳಗೆ ನೀರು ಬಂದವು. ಕೆಳಗೆ ಉದುರದೆ ರೆಪ್ಪೆಯ ಅಕ್ಕ ಪಕ್ಕ ಅಣಿಮುತ್ತಿನಂತೆ ನಿಂತವು. ಬೆದಿಗೆ**

**ಉಟ್ಟಿದೋಪು, ಮೈತೀಟೆಗೆ ಉಟ್ಟಿ ದೋಪು ಅಂದುಕೊಂಡ. ಇಸಿ ಬಳಿದದ್ದು ಉಚ್ಚೆ ಬಳಿದಿದ್ದು, ಹೆಗಲ ಮೇಲೆ ಕುಂಡ್ರಿಸಿಕೊಂಡು ಕೊಟ್ರು ಜಾತ್ರೆಯಲ್ಲಿ ತಿರುಗಾಡಿಸಿಕೊಂಡು ಬಂದಿದ್ದು, ತನಗೆ ಕಮ್ಮಿ ಮಾಡಿಕೊಂಡು ಅವಕ್ಕೆ ಉಣ್ಣಿಸಿದ್ದು ಈ ಎಲ್ಲ ನೆನಪುಗಳ ಜೊತೆಗೆ ದುಕ್ಕ ಉಮ್ಮಳಿಸಿಕೊಂಡು ಬಂತು. ಅವಾದ್ರು ಸುಕವಾಗಿರ್ಲಿ ಈ ಅಳ್ಯಾಗ ಉಪವಾಸ, ವನ್ವಾಸ ಸಾಯೋದ್ಕಿಂತ... ಅಂತ ಹಿಂದೊಮ್ಮೆ ಮುದುಕಿ ಅಂದಿತ್ತು.**[೧]

ಎಂದು ಶುರುವಾಗುವ ಕರಿಯನ ಪುರಾಣ ಅವನ ಹಸಿವನ್ನು ವರ್ಣಿಸುವುದರ ಜೊತೆ ಜೊತೆಗೆ ಅವನ ಕುಟುಂಬದ ಪರಿಸ್ಥಿತಿಯನ್ನು ನಿರೂಪಿಸಲಾಗುತ್ತದೆ. ಅವನ ತಲೆಯೊಳಗೆ ಪೇಟೆ ಸೇರಿದ ಮಗಳು ದ್ಯಾಮಿ, ಮತ್ತು ಚಾದಂಗಡಿಯಲ್ಲಿ ಎಂಜಲು ತೊಳೆಯುವ ಮಗ ಸಿದ್ದ ಸುಳಿಯುತ್ತಾರೆ. ಅವರನ್ನು 'ಮೈತೀಟೆಗೆ ಉಟ್ಟಿದೋಪು'[೨] ಅಂದುಕೊಳ್ಳುತ್ತಾನೆ. ಅವರನ್ನು ಜೋಪಾನ ಮಾಡುವಲ್ಲಿ ತಾನು ಪಟ್ಟ ಪಾಡನ್ನು ನೆನಪಿಸಿಕೊಳ್ಳುತ್ತಾನೆ. 'ಇಸಿ ಬಳಿದದ್ದು, ಉಚ್ಚೆ ಬಳಿದದ್ದು, ಹೆಗಲ ಮೇಲೆ ಕುಂಡ್ರಿಸಿಕೊಂಡು ಕೊಟ್ರು ಜಾತ್ರೆಯಲ್ಲಿ ತಿರುಗಾಡಿಸಿಕೊಂಡು ಬಂದಿದ್ದು, ತನಗೆ ಕಮ್ಮಿ ಮಾಡಿಕೊಂಡು ಅವಕ್ಕೆ ಉಣ್ಣಿಸಿದ್ದು ಈ ಎಲ್ಲ ನೆನಪುಗಳ ಜೊತೆಗೆ ದುಕ್ಕ ಉಮ್ಮಳಿಸಿಕೊಂಡು ಬಂತು. ಅವಾದ್ರು ಸುಕವಾಗಿರ್ಲಿ ಈ ಅಳ್ಯಾಗ ಉಪವಾಸ, ವನ್ವಾಸ ಸಾಯೋದ್ಕಿಂತ... ಅಂತ ಹಿಂದೊಮ್ಮೆ ಮುದುಕಿ ಅಂದಿತ್ತು'[೩] ಎಂಬುದನ್ನು ನೆನಪಿಸಿಕೊಳ್ಳುತ್ತಾನೆ. ಪ್ರಸ್ತುತ ಕರಿಯ ಕೂಡ ಅದೇ ಹಸಿವಿನಿಂದ ತತ್ತರಿಸುತ್ತಾ ಗೌಡರೋಣಿ, ಕ್ವಾಂಟ್ರ ಓಣಿ, ಬಣಜಿಗರ ಓಣಿ ಹೀಗೆ ಓಣಿಗಳಲ್ಲಿ ಅಡ್ಡಾಡುತ್ತಾ ಬರುತ್ತಿದ್ದ ಕರಿಯನ ಹಸಿವಿನ ಹಿಂದಿನ ಕಾರಣಗಳೇನೂ ಎಂದು ಕಥೆಯಲ್ಲಿ ಎಲ್ಲಿಯೂ ಸ್ಪಷ್ಟವಾಗುವುದಿಲ್ಲ. ಅದೂ ಯುಗಾದಿಯ ದಿವಸ ಹೀಗೆ ಓಣಿ ಓಣಿಗಳಲ್ಲಿ ಹಾದು ಬರುತ್ತಿರುವ ಕರಿಯನಿಗೆ ಮನೆಗಳಲ್ಲಿ ಹೋಳಿಗೆಯ ಅಡುಗೆ ಮಾಡುತ್ತಿರುವುದರ ಪರಿಮಳ ಮೂಗಿಗೆ ತಾಕುತ್ತದೆ. ಈ ಮಧ್ಯೆ ಅವನ ತಲೆಯೊಂದು ಆಲೋಚನೆಯೂ ಮೊಳೆಯುತ್ತದೆ. ಮಧ್ಯದಲ್ಲಿ ಹೀಗೂ ಯೋಚಿಸುತ್ತಾನೆ. "…. ತಾನು ತೋಪಿನ ಕಡೆಗೆ ಹೋಗುವುದೇ, ಬಿಡುವುದೇ ಎಂದು ಹಸಿವಿನ ಜೊತೆ ಯೋಚಿಸಿದ. ತೀರಿಸಿಕೊಳ್ಳಲಾಗದ ಹಸಿವು ಸಾವಿಗೆ ಬಲು ಹತ್ತಿರದಲ್ಲೆ ಸುಳಿಯುತ್ತಿರುವುದು ಕತ್ತಲಗೆ ಅರ್ಥವಾಗಲಾರದು ಕೂಡ. ಅನ್ನ ಕಾಣದ ಹೊಟ್ಟೆಯೊಳಗೆ ಬೆಂಕಿ ಕಾಣಿಸಿಕೊಳ್ಳಬೇಕು. ಆ ಬೆಂಕಿ ಕಾಂಕ್ರೀಟು ಕಟ್ಟಡಗಳನ್ನು ಸುಟ್ಟು ಬೂದಿ ಮಾಡಬಲ್ಲದು ಎಂದು ತಿಳಿದುಕೊಳ್ಳಲು ಕತ್ತಲ ಇನ್ನೂ ಹಸಿಯ ಬೇಕಾಗಿದೆ. ಹಸಿವೆಗೆ ಮೂಲ ಕಾರಣಗಳನ್ನು ಶೋಧಿಸುವಲ್ಲಿ ಕತ್ತಲ ಹೆಜ್ಜೆ ಇಡತೊಡಗಿದ.'[೪] ಹೀಗೆ ಯೋಚಿಸುತ್ತ ಸಾಗಿದ ಕರಿಯನಿಗೆ ತಾನು ಗೌಡರ ಮನೆಯಲ್ಲಿ ಗೈದದ್ದು ನೆನಪಿಗೆ ಬರುತ್ತದೆ.

**ಸಾರಿಸಿದ ಅಂಗಳ, ಅಲ್ಲಲ್ಲಿ ಚುಕ್ಕಿಗಳ ರಂಗವಲ್ಲಿ, ತುಳಿಯುವಂತಿಲ್ಲ. ದಾಟುವಂತಿಲ್ಲ. ಒಳಗಿನಿಂದ ಬಂದ ಕಮ್ಮನೆಯ ಪರಿಮಳ ಮೂಗಿಗೆ ಬಡಿಯಿತು. ಇಂಥದ್ದೆ ಇರಬಹುದೆಂದು ಊಹಿಸಿದ. ಅವರು ಚೆಲ್ಲುವುದರಲ್ಲಿ ತನಗೊಂದು ಹಿಡಿ ನೀಡಬಾರದ್ಯಾಕೆ ಅನ್ನಿಸಿತು. ನಿಂತು ಮಿಕಿ ಮಿಕಿ ನೋಡಿದ. ಅಮ್ಮಾ ಅನ್ನ ಬೇಕೆಂದರೆ ನಾಲಗೆ ಮಿಸುಕಲೊಲ್ಲದು. ಹಾಳುಮನೆಯ ಬಚ್ಚಲಿನಂಥ ಬಾಯಿಯೊಳಗೆ ನಾಲಗೆ ಅದ್ಹೇಗೆ ಹೊರಳಾಡೀತು. ಇದೇ ಮನೆಯ ಚಾಕರಿ ಕತ್ತಲನಿಗೆ ಹೊಸದೇನಲ್ಲ. ಬಂಡಿ ಬಂಡಿ ಕಟ್ಟಿಗೆ ಸೀಳಿರುವವನು. ದನಗಳ ಮೈಯನ್ನು ಕನ್ನಡಿಯಂಗೆ ತೊಳೆದಿರುವವನು. ಹೊಲ ಕಾದಿರುವವನು. ಸೆಗಣಿ ಬಳಿದಿರುವವನು. ಆದ್ದರಿಂದ ತನಗೆ ನೀಡೇ ನೀಡುವರೆಂದು ನಿಂತ. ನೀಡಲು ಬಂದರೆ ನೀಡಿಸಿಕೊಳ್ಳಲು ಗಟ್ಟಿ ಅಂಗಿ ಇಲ್ಲವಲ್ಲ. ಶಲ್ಯೇವು ಇಲ್ಲವಲ್ಲ ಎಂದು ಮಿಡುಕಿದ. ಬೊಗಸೆಯಲ್ಲಿ ನೀಡಿಸಿಕೊಂಡರಾಯಿತು. ಬಾನಕ್ಕೆ ಬಾಯಿ, ಕಚ್ಚಿ ನಾಯಿ ಉಣ್ಣುವುದಲ್ಲ, ಹಾಗೆ ತಿಂದರಾಯಿತು. ನಿಂತೇ**

ನಿಂತ, ಹಸಿದ ಹೊಟ್ಟೆಯ ಸ್ಥಿತಿಗತಿಗಳನ್ನು ಕಣ್ಣಿನಿಂದಲೇ ಹೇಳಿಕೊಂಡ. ದಪ್ಪ ಮೈ, ಜನ, ಕತ್ತಲನ ಕಡೆ ನೋಡುವುದು ಹೇಸಿಗೆ ಅಂದು ಕೊಂಡಿರಬೇಕು ಅವರು. ಚಿಕ್ಕ ನಾಯಿಯೊಂದು ಕತ್ತಲನ ಮೈ ಮೂಸಿ ಬೊಗಳಿ ಗದರಿಸಿತು. ಅವನು ಪ್ರತಿಭಟಿಸಲಿಲ್ಲ. ಅದು ಮೊದಲೇ ಸಾರಿಸಿದ್ದ ನೆಲ, ರಂಗವಲ್ಲಿ ದಾಟಿ ತಲ ಬಾಗಿಲ ಹೊಸ್ತಿಲ ಮೇಲೆ ಮುಂಗಾಲುಗಳೆರಡನ್ನು ಊರಿ ಡೇಗುತ್ತ ನಿಂತಿತು. ಕುಂಯ್ ಕುಂಯ್ ರಾಗ ಮಾಡಿ ಬಾಲ ಅಲುಗಾಡಿಸಿತು. ಹುಡುಗನೊಬ್ಬ ಬಂದು ನಾಯಿ ತಲೆ ಸವರಿದ. ಸೇಕೆಂಡು ಕ್ಯಡು ಅಂತ ಕೈಚಾಚಿದ. ಮುಜುಗರದಿಂದ ಅದು ಒಂದು ಮುಂಗಾಲೆತ್ತಿ ಹುಡುಗನ ಕೈ ಮೇಲಿಟ್ಟು ತೆಗೆಯಿತು. ಅಷ್ಟಕ್ಕೆ ಹುಡುಗನಿಗೆ ಹೇಳತೀರದ ಸಂತೋಷ, ನಾಯಿ ನನಗೆ ಸೆಕೆಂಡು ಕ್ಯಡ್ತು ಅಂತ ಪದೇ ಪದೇ ಕೂಗುತ್ತ ಒಳಗೆ ಓಡಿದ. ತಾನೂ ನಾಯಿಯ ಹಾಗೆ ಸಾರಿಸಿದ ನೆಲ, ರಂಗವಲ್ಲಿ ದಾಟಿ ಹೊಸ್ತಿಲ ಬಳಿ ನಿಂತುಕೊಳ್ಳಲೇ ಹೇಗೆ ಎಂದು ಯೋಚಿಸಿದ. ಆ ನಾಯಿಯಷ್ಟು ತನ್ನನ್ನು ಯಾರೂ ಸೇರುವುದಿಲ್ಲವಲ್ಲ ಎಂದು ಹಲುಬಿದ. ಮತ್ತೆ ಕಣ್ಣಿನಿಂದ ಎಲ್ಲು ಹನಿ ನೀರು ಇಳಿದು ರೆಪ್ಪೆ ಮೇಲೆ ಮುತ್ತು ಪೋಣಿಸಿದಂತೆ ನಿಂತವು. ಎವ್ವಾ ವಟ್ಟೆ ಅಸ್ತದೆ ಅಂತ ಕಣ್ಣಿನಿಂದ ಕೂಗಿ ಹೇಳಿದ. ಯಾರೂ ಗಮನಿಸಲಿಲ್ಲ. ಚಾವೊತ್ತಿಗೆ ಹುಡುಗ ಕಣ್ಣಿ ಅನ್ನ ಹಿಡಿದುಕೊಂಡು ಬಂದದ್ದು ಕಂಡು ಕತ್ತಲ ಹಿಗ್ಗಿನಿಂದ ಉಬ್ಬಿದ. ಇನ್ನೂ ಸರಿಯಾಗಿ ಬೊಗಸೆ ಒಡ್ಡಿರಲಿಲ್ಲ. ಅನ್ನವನ್ನು ಬಂಡೆಯ ಮೇಲಿಟ್ಟು ಕುರ್ರೋ ಕುರ್ರೋ ಅಂದ. ನಾಯಿ ಓಡಿ ಬಂತು. ಕತ್ತಲನನ್ನು ನೋಡಿ ಗುರ್ರ್ ಅಂತು. ಹುಡುಗ ಓಗ್ ಓಗ್ ಅಂತ ಗದರಿಸುತ್ತಲೆ ಕತ್ತಲನ ಮೈ ತಣ್ಣಗಾಯಿತು. ತಕ್ಷಣ ಸಿಟ್ಟೂ ಬಂತು. ರಂಗವಲ್ಲಿಯನ್ನು ಕಾಲಿನಿಂದ ತಿಕ್ಕಿ ಮತ್ತೆ ಬೀದಿಗೆ ಬಿದ್ದ. ಎಲ್ಲೋ ಗಣ ಗಣ ಗಂಟೆಯ ಶಬ್ದ. ರಂಗವಲ್ಲಿಯನ್ನು ಕಾಲಿನಿಂದ ತಿಕ್ಕಿ ಮತ್ತೆ ಬೀದಿಗೆ ಬಿದ್ದ.

ಕರಿಯ ತನ್ನನ್ನು ನಾಯಿಯ ಜೊತೆ ಹೋಲಿಸಿಕೊಂಡು ನೋಡುವುದು, ಅವನ ಭೀಕರವಾದ ಹಸಿವು ಅವನನ್ನು ಹೀಗೆಲ್ಲ ಆಲೋಚಿಸುವುದಕ್ಕೆ ಕಾರಣವಾಗುತ್ತದೆಂದು ಕಥೆಗಾರರು ನಿರೂಪಣೆಯಲ್ಲಿ ಹೇಳುವುದು ಸ್ಪಷ್ಟವಾಗಿಯೇ ಇದೆ. ಮತ್ತೆ ಮುಂದುವರೆದು 'ಅವನಿಗೆ ಕಸುವು ಬರಬೇಕಾದರೆ ಒಂದು ಹಿಡಿ ಬಾನವಾದರೂ ಹೊಟ್ಟೆಗೆ ಬೇಕು. ಅನ್ನ ಸಿಕ್ಕರೆ ಬದುಕುವುದು ಗ್ಯಾರಂಟಿ. ಸಿಕ್ಕರೆ ಅದು ತತ್‌ಕ್ಷಣ ಸಿಗಬೇಕು. ಮರಗಳ ಆಸರೆಯಿಂದ ಮನೆ ಗೋಡೆಗಳ ಆಸರೆಯಿಂದ ಚಾವತ್ತಿಗೊಂದರಂತೆ ಹೆಜ್ಜೆ ಇಡುತ್ತ ನಡೆದ. ಕೆಳಗೇರಿ ಹೊರೆತು ಊರೆಲ್ಲಾ ವಾಸನೆ' ಎಂಬುದಾಗಿ ವಿವರಿಸುತ್ತಾರೆ. ಊರೆಲ್ಲಾ ಹಬ್ಬ ಮಾಡುತ್ತಿರುವಾಗ ಕೆಳಗೇರಿಯಲ್ಲಿ ಮಾತ್ರ ಹಬ್ಬ ಮಾಡುತ್ತಿಲ್ಲವೆಂದೂ ಸಹ ವಿವರಿಸಲಾಗಿದೆ. ಈ ರೀತಿಯ ಹಸಿವೆಗೆ ಕಾರಣವೇನಿದ್ದರಬಹುದೆಂದು ಕಥೆಯಲ್ಲಿ ಎಲ್ಲಿಯೂ ಸ್ಪಷ್ಟಪಡಿಸದಿರುವುದು ಗಮನಿಸಬೇಕಾದ ಅಂಶ. ಕನಿಷ್ಟ ಬರಗಾಲವಿದೆಯೆಂದಾದರೂ ಹೇಳಬಹುದಿತ್ತು. ಈ ನಡುವೆ ಕಥೆಗಾರರು ಕರಿಯನ ನೆನಪಿನ ಸುರುಳಿಯಲ್ಲಿ ಆಸಕ್ತಿಕರ ವಿವರಗಳನ್ನು ನೀಡುತ್ತಾರೆ. ಅಥವಾ ಕರಿಯನಿಂದ ಹೇಳಿಸುತ್ತಾರೆಂದರೂ ತಪ್ಪಲ್ಲ. ಗೌಡನಿಗೆ ಹುಟ್ಟಿದವೆಂದು ಎರಡು ಕೂಸುಗಳನ್ನು ಕರಿಯ ನಿರ್ದಯವಾಗಿ ಕತ್ತು ಹಿಸುಕಿ ಕೊಲ್ಲುವುದನ್ನು ಸಹ ವಿವರಿಸಲಾಗಿದೆ.

ಹೀಗೆ ತನ್ನ ಗತದ ನೆನಪಿನ ಸುರುಳಿಯನ್ನು ಬಿಚ್ಚುತ್ತಾ ಸಾಗಿದ ಕರಿಯ ಹಬ್ಬದ ಸಡಗರವನ್ನು ನೋಡುತ್ತಾ ಈಶ್ವರ ದೇವಸ್ಥಾನದ ಹತ್ತಿರ ಬರುತ್ತಾನೆ. ನಂತರದ ನಿರೂಪಣೆ ಹೀಗಿದೆ –

ಕಮಾಯದ ಸೂರ್ಯ ಪಡುಗಡಗೆ ಇಳಿಯತೊಡಗಿದ. ಮಂದಿಯೂ ಮೊದಲಿನಷ್ಟಿರಲಿಲ್ಲ. ಅಲ್ಲೊಬ್ಬರು ಇಲ್ಲೊಬ್ಬರು, ಅಲ್ಲಿಂದ ಗುಡಿ ಕಡೆ ಕಾಲುಕಿತ್ತ. ಗುಡಿ ತಲಬಾಗಿಲು ಮುಟ್ಟಿದಾಗ ಎದೆ ಅದುರಲಿಲ್ಲ. ಬಗ್ಗಿ ನೋಡಿದ. ಒಳಗಡೆ

ತುಪ್ಪದ ದೀಪದ ಬೆಳಕಿನಲ್ಲಿ ದಕ್ಷಿಣೆ ಕಾಸು ಎಣಿಸುತ್ತ ಕೂತಿದ್ದ ಪೂಜಾರಿಗೆ ಯಾವ ಕಡೆ ಧ್ಯಾಸ ಇರಲಿಲ್ಲ. ಒಂದು ಕಡೆಗೆ ಸಹಸ್ರಾರು ನೊಣಗಳ ಆಕ್ರಮಣಕ್ಕೆ ತುತ್ತಾಗಿ ಹೋಳಿಗೆ, ಹುಗ್ಗಿ ಮತ್ತು ಅನ್ನದ ರಾಶಿ! ಬಿಟ್ಟ ಕಣ್ಣು ಮುಚ್ಚದೆ ನೋಡಿದ. ಆಶ್ಚರ್ಯದ ಜೊತೆಗೆ ಬಾಯಿ ತೇವಗೊಂಡಿತು. ನಾಲಗೆ ತುಟಿ ಸವರಿತು. ನೋಡಿದ ಮಾತ್ರಕ್ಕೆ ಕತ್ತಲ ಇಷ್ಟು ಚುರುಕಾದ, ಇನ್ನು ತಿಂದರೆಷ್ಟು ಗೆಲುವಾಗುವನೋ ಕತ್ತಲ ಇನ್ನೂ ಒಂದು ಹೆಜ್ಜೆ ಮುಂದೆ ಸರಿದು ಬಗ್ಗಿ ನೋಡಿದ. ಪೂಜಾರಿಯ ತಲೆ ತಿರುಗಿತು. ಕೂತಲ್ಲಿಂದಲೇ ಯಾರೋ ಅವ ಅಂದ. ನಾನ್ರೀ ಎಪ್ಪ ಕತ್ಲ ಅನ್ನುತ್ತಲೇ ಪೂಜಾರಿ ಸರಕ್ಕನೆ ಇತ್ತ ಕಡೆ ಬಂದು ನಾಯಿ ಮುಂಡೇದೆ ಇಲ್ಲೀವರ್ಗೂ ಬಂದ್ಯಾ, ತೊಲಗಾಚೆ ಅಂತ ಗದರಿಸಿದ. ಕತ್ತಲ ಸರಿಯಲಿಲ್ಲ. ಎಲ್ಡು ದಿನದಿಂದ ಉಂಡಿಲ್ಲ. ಅದ್ರಾಗುಳ್ದ ಒಂದೀಟಕ್ಕಡ್ರಿ ಅಂದ. ಪೂಜಾರಿ ಕಟ ಕಟ ಹಲ್ಲು ಕಡಿದ. ಇದ್ದ ಎರಡೇ ಹಲ್ಲುಗಳ ಪೈಕಿ ಒಂದು ಅಲುಗಾಡತೊಡಗಿತು.

ನಿನ್ನಂಥೋವ್ಕೆ ಕ್ಕಡೋಕಲ್ಲ ಅದಿರೋದು... ಅದು ಪರ್ಸಾದ, ಪೂಜಾರಿಯ ಈ ಮಾತು ಕೇಳಿ ಕತ್ತಲನ ಮೈಯೊಳಗೆ ಎಂಥದೋ ಆವೇಶ ತುಂಬಿಕೊಂಡಿತು. ಪರ್ಸಾದಂತೆ ಪರ್ಸಾದ ಅಂದವನೆ ಕತ್ತಲ ಪೂಜಾರಿಯನ್ನೀಚೆ ತಳ್ಳಿ ಒಳನುಗ್ಗಿದ. ಅವನನ್ನು ಮುಟ್ಟಿದರೆಲ್ಲಿ ತನ್ನ ಮೈ ಸುಟ್ಟುಹೋಗುವುದೋ ಎಂದು ಹೆದರಿ ಪೂಜಾರಿ ಕತ್ತಲನನ್ನು ತಡವದೆ ಅಂಗಳದಲ್ಲಿ ನಿಂತು ಬೊಬ್ಬೆ ಹಾಕತೊಡಗಿದ. ಮನೆಗಳು ಗುಡಿಗೆ ಸ್ವಲ್ಪ ದೂರದಲ್ಲಿದ್ದುದರಿಂದ ಪೂಜಾರಿಯ ಕೂಗು ನಿಧಾನವಾಗಿ ಭಕ್ತಾದಿಗಳ ಕಿವಿಗಳನ್ನು ತಲುಪಿತು.

ಇತ್ತ ಒಳಗೆ ನುಗ್ಗಿದ ಕತ್ತಲ ಅವಸರ ಅವಸರವಾಗಿ ಸಿಕ್ಕಸಿಕ್ಕದ್ದು ಬಾಯಿಗೆ ತುರುಕಿಕೊಂಡ. ಗಂಟಲಿಗೆ ಬಿದ್ದಾಗ ತೀರ್ಥದ ತಂಬಿಗೆ ಎತ್ತಿದ. ತಿಂದಾದ ಮೇಲೆ ದೋತರದ ಒಂದು ಮಗ್ಗಲು ಹುಗ್ಗಿ, ಹೋಳಿಗೆ ಗಂಟುಕಟ್ಟಿಕೊಂಡ. ಹೊರಗೆ ದಡ್ ದಡ್ ಶಬ್ದ ಬೇರೆ. ಮಂದಿ ಗುಡಿ ಕಡೆ ಓಡೋಡಿ ಬರುತ್ತಿರುವುದನ್ನು ಕಿಟಕಿ ಮೂಲಕ ಕಂಡವನೆ ಲಿಂಗದ ಪಕ್ಕ ಉದ್ದೋಕೆ ನಿಲ್ಲಿಸಿದ ತ್ರಿಶೂಲ ಎತ್ತಿಕೊಂಡು ಬಾಗಿಲ ಬಳಿಗೆ ಬಂದ. ಎದುರಿಗೆ ಗೋಡೆಯಂತೆ ನಿಂತಿತ್ತು. ದಿಗ್ಭ್ರಮಿತ ಜನ. ಅಡ್ ಯಾವ್ನೋನಾದ್ರೂ ಬಂದ್ರೆ ಈ ತ್ರಿಶೂಲದಿಂದ ಇರ್ದುಬುಡ್ತೀನಿ ಅಂತ ಕತ್ತಲ ಒಮ್ಮೆ ಗಟ್ಟಿಯಾಗಿ ಎಚ್ಚರಿಸಿದ. ಜನರು ತಬ್ಬಿಬ್ಬಾಗಿ ಹಿಂದೆ ಸರಿದರು. ಹಂಗಿದ್ದವು ಕತ್ತಲನ ಕಣ್ಣುಗಳು. ದಾರಿ ಮಾಡಿಕೊಟ್ಟರು. ನಿರ್ಭೀತನಾಗಿ ನಡೆದು ಹೋದ ಕತ್ತಲ ಹಗಲಿನಲ್ಲಿ ಕಣ್ಣಿಂದ ಮರೆಯಾಗುವವರೆಗೂ...

ಎಂಬಲ್ಲಿಗೆ ಕಥೆ ಮುಕ್ತಾಯವಾಗುತ್ತದೆ. ಇಲ್ಲಿನ ಕಥೆಯಲ್ಲಿನ ಪ್ರಾದೇಶಿಕತೆಯ ಅಂಶಗಳನ್ನು ಗಮನಿಸುವುದಕ್ಕಿಂತ ಮುಂಚೆ ಕೆಲವು ತಾತ್ವಿಕ ಪ್ರಶ್ನೆಗಳು ಉದ್ಭವಿಸುವುದು ಸಹಜವಾಗಿದೆ. ದಲಿತರಲ್ಲದ ಲೇಖಕರು ದಲಿತರ ಬದುಕನ್ನು ಅವರ ಬದುಕಿನಿಂದ ಹೊರಗೆ ನಿಂತು ನೋಡುವುದು, ಕರಿಯನಂಥ ಪಾತ್ರದ ಮೂಲಕ ಭೀಕರವಾದ ಹಸಿವೊಂದನ್ನು ಸೃಷ್ಟಿಸಲು ಹೆಣಗುತ್ತಿರುವುದು ಹಾಸ್ಯಾಸ್ಪದವೆನಿಸುತ್ತದೆ. ಕಥೆಯ ವಸ್ತು ಮತ್ತು ತಂತ್ರ, ನಿರೂಪಣೆ ಇವ್ಯಾವೂ ಒಟ್ಟಂದದಲ್ಲಿ ಕಥೆಯನ್ನು ಪರಿಪುಷ್ಟಿಗೊಳಿಸುವಲ್ಲಿ ವಿಫಲವಾಗುತ್ತವೆಂದೇ ಹೇಳಬೇಕಾಗುತ್ತದೆ. ಇಲ್ಲದಿದ್ದಲ್ಲಿ ಕರಿಯ ಹಸಿವಿನಿಂದ ತತ್ತರಿಸುತ್ತ ಓಣಿಗಳಲ್ಲಿ ಹಾದು ಬರುವಾಗ ಅವನು ಹಸಿವಿಗೆ ಪ್ರತಿಕ್ರಿಯಿಸುವ ಬಗೆ ದಲಿತರ ಆತ್ಮಗೌರವವನ್ನು ಸ್ವಾಭಿಮಾನವನ್ನು ಹೀಗೆಳೆದಂತೆಯೇ ಆಗುತ್ತದೆ. ಬಹುಶಃ ದಲಿತರಲ್ಲದ ಕಥೆಗಾರರು ಇಂತಹ ಬಗೆಯ ವಸ್ತುಗಳನ್ನು ಆಯ್ದುಕೊಳ್ಳುವಾಗ ಇರುವ ಕನಿಷ್ಟ

ನೈತಿಕತೆಯೂ ಸಹ ಇಲ್ಲಿಲ್ಲವೆಂತಲೇ ಹೇಳಬೇಕಾಗುತ್ತದೆ. ಕಥೆಗಾರರು ತಾವು ನಂಬಿದ ಸಿದ್ಧಾಂತ, ತತ್ವಗಳನ್ನು ಪ್ರತಿಪಾದಿಸಲು ಕಥೆಯಂತಹ ಕಲಾತ್ಮಕ ಮಾಧ್ಯಮವನ್ನು ಆರಿಸಿಕೊಳ್ಳುವಾಗ ತಾವು ಸೃಷ್ಟಿಸುವ ಪಾತ್ರಗಳಿಗೆ ಕನಿಷ್ಟಪಕ್ಷದ ನ್ಯಾಯವಾದರೂ ಸಿಗುವಂತಿರಬೇಕು. ಇದನ್ನು ಮತ್ತಷ್ಟು ಸ್ಪಷ್ಟ ಪಡಿಸುವಾದದರೆ ಕುಂವೀ ಅವರ ಮತ್ತೊಂದು ಕಥೆ 'ದೇವರ ಹೆಣ'ವನ್ನು ಪರಿಶೀಲಿಸಬಹುದಾಗಿದೆ.

**೨. ದೇವರ ಹೆಣ**

ಈ ಕಥೆಯ ಮೂಲ ಆಶಯ ಕೂಡ ಹಸಿವಿನ ವಿರುದ್ಧದ ಪ್ರತಿಭಟನೆಯಾಗಿದೆ. "ಇದಕ್ಕೂ ಮೊದಲು ಒಂದು ದಿನ ತೊಣ್ಣಿ ಅನ್ನ ಎಂಬ ಶಬ್ದ ಕಿವಿಗೆ ಬೀಳುತ್ತಲೆ ಹ್ಹ ಹ್ಹ ಅಂತ ನಕ್ಕು ಬಿಟ್ಟಿದ್ದನು. ಒಂದು ಹನಿ ಮಳೆ ಮಳೆ ಕಾಣದೆ ಇಡೀ ನೆಲ ಎಂಬೋ ನೆಲ ಕೆಟ್ಟದಾಗಿ ಹಸಿದ ಹೊಟ್ಟೆಯಂಥಾಗಿ ಉರಿ ಉರಿ ಹಾಯತೊಡಗಿತ್ತು. ಮುಳ್ಳಿನ ಗಿಡಗಳಲ್ಲಿ ಕೇವಲ ಮುಳ್ಳುಗಳಷ್ಟೇ ಹಚ್ಚಗಿದ್ದವು. ಅವನ ಜೇಬಿನಲ್ಲಿ ಒಂದು ಹಿಡಿ ಹೊಗೆ ಸೊಪ್ಪು ಇತ್ತು. ಅದಕ್ಕೊಂದು ಎಕ್ಕೆ ಎಲೆ ಸಿಕ್ಕರೆ ಸಾಕೆಂದು ಚಂಡಿ ಹಿಡಿದವನಂತೆ ಮುಖವನ್ನು ವಿಚಿತ್ರವಾಗಿ ಬಿಗಿದುಕೊಂಡಿದ್ದ. ಹಾಗೆ ಬಿಗಿದುಕೊಂಡೇ ಹುಲುಲಿ ಹಳ್ಳದ ಗುಂಟ ಎರಡು ಧಮ್ಮು ನಡೆದುಬಿಟ್ಟರೆ ಸಾಕಿತ್ತು. ಒಟ್ಟಾಗಿರುವ ಬಂದಳಿಕೆ ಗಿಡಗಳ ಪಕ್ಕದಲ್ಲಿಯೇ ಎಕ್ಕಿ ಗಿಡವೊಂದಿರುವುದು. ಶಿವನ ಮೂರನೆ ಕಣ್ಣಿನಾಕಾರದ ಆ ಎಲೆಗಳು ಅದರ ತುಂಬ ಇರುವವು. ಅವು ಬಿರು ಬಿಸಿಲನ್ನು ಅಣಕಿಸುತ್ತಿರುವ ರೀತಿಯಲ್ಲಿ ಸಣ್ಣ ಗಾಳಿಗೆ ಮಿಸುಕಾಡುತ್ತಿರುವುವು" ಎಂದು ಹೇಳುವಲ್ಲಿ ತೊಣ್ಣಿಯ ಹಸಿವನ್ನು ಮತ್ತು ಬರಗಾಲದ ಪರಿಸರವನ್ನು ಹೇಳಲು ಪ್ರಯತ್ನಿಸಲಾಗಿದೆ. ಜೇಬಳೊಗಿನ ಹಿಡಿಯಷ್ಟು ಹೊಗೆ ಸೊಪ್ಪಿಗೆ ಬೇಕಾದ ಎಕ್ಕಿ ಎಲೆಯ ಯೋಚನೆಯಲ್ಲಿ ಅವನು ಹೊಸ್ತಿಲು ದಾಟುತ್ತಲೆ ವಟವಟಗುಟ್ಟುತ್ತಾ ಹೆಂಡತಿ ಎದುರಾದಳು. ಆತನ ಹಿರಿಯ ಮಗ ಇಲಿಯೊಂದನ್ನು ಸುಟ್ಟು ತಿಂದು ಮುಖದ ತುಂಬ ನಳನಳಿಸುವ ಕಳೆ ತುಂಬಿಕೊಂಡಿದ್ದನೆಂದು ಲೇಖಕರು ವಿವರಿಸುತ್ತಾರೆ. ಕೆಲವು ಸಮುದಾಯಗಳಲ್ಲಿ ಈ ಪ್ರದೇಶದಲ್ಲಿ ಚಿಟ್ಟಿಲಿ ಅಥವಾ ಕೆಂಪು ಬಣ್ಣದ ಇಲಿಯನ್ನು ಸುಟ್ಟು ತಿನ್ನುವ ಪದ್ಧತಿ ಇದೆ. ಆದರೆ ಮನೆ ಸುತ್ತಮುತ್ತಲಿನ ಇಲಿಯನ್ನು ತಿನ್ನುವುದಿಲ್ಲ. ಆದರೆ ಯಾವ ಇಲಿಯೆಂಬುದನ್ನು ಲೇಖಕರು ಸ್ಪಷ್ಟಪಡಿಸಲು ಸಹ ಹೋಗಿಲ್ಲ. ಬಹುಶಃ ಸೋಮಾಲಿಯಾ ತರಹದ ಕ್ಷಾಮವೊಂದು ಲೇಖಕರ ದೃಷ್ಟಿಯಲ್ಲಿದ್ದಿರಬಹುದು! ಹಾಗೆ ಜೇಬಲ್ಲಿರುವ ಹಿಡಿಯಷ್ಟು ತಂಬಾಕಿಗೆ ಎಕ್ಕೆ ಎಲೆ ಅರಸುತ್ತಾ ಹೊರಟವನಿಗೆ ಹೊಸ್ತಿಲು ದಾಟುವುದರೊಳಗೆ ಕಂಡಿದ್ದನ್ನು ಅವಗಾಹನೆಗೆ ತಂದುಕೊಳ್ಳುತ್ತಾನೆ. ಇದು ಲೇಖಕರ ನಿರೂಪಣಾ ಕ್ರಮವೂ ಇದ್ದಿರಬಹುದು. ಇಲಿಯನ್ನು ತಿಂದು ನಳನಳಿಸುತ್ತಿದ ಮುಖದ ಹಿರಿ ಮಗ ತನ್ನ ಟೆರಿಕಾಟ್ ಅಂಗಿಯ ಹತ್ತಾರು ಸಂದಿಗಳಲ್ಲಿ ನಿಗೂಢವಾಗಿ ಅಡಗಿರಬಹುದಾದ ನುಸಿ ಕ್ರಿಮಿಗಳನ್ನಾಯುವುದರಲ್ಲಿ ಮಗ್ನನಾಗಿರುವುದ ಕಂಡುಬಂದಿತು. ಮತ್ತಲ್ಲಿಯೇ ಅಪಾರೀ, ತಿಮ್ಮಿ, ಕುಲ್ಡಿ, ಊಟ ಮಾಡುವ ಆಟ ಆಡುತ್ತಿದ್ದುದು ಕಣ್ಣಿಗೆ ಬಿತ್ತು. ಆ ಆಟದಲ್ಲಿ ತಮ್ಮನು ನವಣಕ್ಕಿಯ ಬಾನದ ಪಾಲ್ಪು ಮಾಡಿದ್ದನು. ಕುಲ್ಡಿ ಘಮಾಡಿಸುವ ಸಾರಿನ ಪಾಲ್ಪು ಮಾಡಿದ್ದಳು. ಆ ಮಕ್ಕಳು ತಾವು ಮಾಡಿದ ಅಡುಗೆಯನ್ನು ಹಿತವಾಗಿ ಕಲೆಸಿ ಉಂಡಂತೆ, ಡೇಗಿದಂತೆ ಮತ್ತೆ ಮತ್ತೆ ನಟಿಸಿದ ಅಪಾರಿ ಎನ್ನುವ ಮಗುವಿನ ತಲೆ ಸವರಿ ಅಡುಗೆ ಮನೆ ಪ್ರವೇಶಿಸುತ್ತಾನೆ. ಬೆಕ್ಕೆಂದು ಒಲೆಯಲ್ಲಿ ಪವಡಿಸಿರುವುದನ್ನು ಹೇಳುತ್ತಾ ಪರಮೆಂಟು ಗೂಡೆಂಬ ರೀತಿಯಲ್ಲಿ ಪವಡಿಸಿದ್ದ ಬೆಕ್ಕೆಂದು ಹೇಳುವಲ್ಲಿ ಬಹು ದಿನಗಳಿಂದ ಒಲೆಗೆ ಬೆಂಕಿ ಹಾಕಿಲ್ಲವೆಂದು ಹೇಳುವ ಇರಾದೆ ಇದೆ. ಅಲ್ಲಿಯೇ ಮೂಲೆಯೊಂದರಲ್ಲಿ ಮಲಗಿದ್ದ ಹುಲಿ ಹೆಸರಿನ ನಾಯಿ ಬೇಟೆಯ ಕನಸು ಕಾಣುತ್ತಿತ್ತೆಂದು ಹೇಳಲಾಗಿದೆ. ಅಡಿಗೆಯ ಮನೆಯಲ್ಲಿನ ಅರಕಲ ಗಡಿಗೆಗಳನ್ನೆಲ್ಲಾ ಪರಿಶೀಲಿಸಿ ಬಂದವನಿಗೆ ತನ್ನ ಚಪ್ಪಲಿಗಳ ನೆನಪಾಗುತ್ತದೆ. ಅವುಗಳಲ್ಲಿ ಒಂದನ್ನು ನಾಯಿಯೊಂದು ಹೊತ್ತೊಯ್ದು ಮಾರೆಮ್ಮನ ಗುಡಿಯ ಗರ್ಭಗುಡಿಯಲ್ಲಿ ಕುಳಿತು ಅದನ್ನು ಜಗಿದು ತಿಂದಿತೆಂದು ವಿವರಿಸಲಾಗಿದೆ. ಇಲ್ಲಿಯೂ ಸಹ ಹಸಿವನ್ನು ತೀವ್ರತೆಯನ್ನು ಹೇಳುವ ಸೂಚನೆಯಿದೆ.

ಹಾಗೆ ಎಕ್ಕೆ ಎಲೆ ಅರಸುತ್ತಾ ಹೊರಟವನಿಗೆ ದಾರಿಯಲ್ಲಿನ ಬಸಂದೇವ್ರ ಗುಡಿಯಲ್ಲಿ ತಾತನೊಬ್ಬ ಇನ್ನೆಂಟು ದಿನಗಳಲ್ಲಿ ಮಳೆಬಾರದಿದ್ದರೆ ಸಾಯುವುದಾಗಿ ಕಳೇಬರದಂತೆ ಕೂತಿದ್ದ ವಿವರಣೆಯೂ ಸಹ ಒಟ್ಟಾರೆ ಕಥೆಯ ನಿರೂಪಣೆಯ ಕ್ರಮದಲ್ಲಿ ಹಸಿವಿನ ತೀವ್ರತೆಯನ್ನು ಹೇಳುವಲ್ಲಿ ಪರಿಣಾಮಕಾರಿಯಾಗಿದೆ. ರೊಣ್ಣಿಗೆ ಎಲ್ಲರಿಗಿಂತ ಮೊದಲೇ ತಾತ ಸಾಯುವುದೇ ಎಂದು ಸಂದೇಹ ಬಂದೊಡನೆ ಸಣ್ಣ ನಗು ಬಂತು. ಹಾಗೆ ಮುಗುಳು ನಗೆ ತುಂಬಿಕೊಂಡು ಗೋಲಿಯಂತೆ ಉರುಳಿ ಉರುಳಿ ಹುಲುಲಿ ಹಳ್ಳದ ದಡ ಸೇರಿದನೆಂಬುದಾಗಿ ಲೇಖಕರು ವಿವರಿಸುತ್ತಾರೆ.

ಅಲ್ಲಿ ಎಕ್ಕೆ ಗಿಡದ ಎಲೆ ತೆಗೆದುಕೊಂಡು ಚಿಲುಮೆ ಮಾಡಿಕೊಂಡು ಹೊಗೆ ಸೇದಲು ಬೆಂಕಿಪೊಟ್ಟಣಕ್ಕೆ ಹುಡುಕಿದರೆ ಪೊಟ್ಟಣ ತರುವುದನ್ನು ಮರೆತು ಬಂದಿದ್ದನು. ಬೆಂಕಿ ಪೊಟ್ಟಣಕ್ಕೆ ಬಂಡಿ ದಾರಿಯಲ್ಲಿ ಕಾದು ದೊರೆತ ಒಂದೇ ಒಂದು ಕಡ್ಡಿಯಿಂದ ಹೊಗೆ ಸೇದುತ್ತಾ ಅದರ ಮತ್ತಿನಿಂದ ತರಗಲೆಯಂತೆ ನಡೆಯತೊಡಗಿದ. ಹಾಗೆ ಭ್ರಾಮಕ ಸ್ಥಿತಿಯಲ್ಲಿದ್ದಾಗ ತನ್ನ ತಲೆಯೊಳಗೆ ಎಂಥದೋ ಪ್ರಾಣಿ ಬೆಳೆಯುತ್ತಿದೆ ಎನ್ನುವ ಭಾವನೆ ಅವನಿಗೆ ಉಂಟಾಯಿತು. ಅದರ ತಲೆ, ತಿಕ ಸ್ಪಷ್ಟವಾಗದಿದ್ದಾಗ ಮತ್ತೊಂದು ದಮ್ಮು ಹೊಗೆ ಎಳೆಯಬೇಕಾಯಿತು ಎಂದು ಲೇಖಕರು ವಿವರಿಸುತ್ತಾರೆ. "ಆ ಕ್ಷಣದ, ಆ ಧೂಮದ ಉದ್ದೀಪನಕ್ಕೆ ಸಿಕ್ಕು ಮೆದುಳು ಗರಿಗೆದರಿದ ಹಕ್ಕಿಯಂತಾಗುತ್ತಲೆ ಅದು ವೃಷಭ ಜಾತಿಗೆ ಸೇರಿದ್ದೆಂದು ಮತ್ತಷ್ಟು ಸ್ಪಷ್ಟವಾಯಿತು. ನೆನಪಿನ ಪದರುಗಳಲ್ಲಿ ಆಕಾರ ನಿಚ್ಚಳವಾಗಿ ರೂಪುಗೊಳ್ಳತೊಡಗುತ್ತದೆ. ಅಲಲಲೈ ಸಾರಥಿ ನಾನುದಾರೆಂದರೆ ಎಂದು ತನ್ನನ್ನು ಕವುಚಿಕೊಂಡಿರುವ ದಾರಿದ್ರ್ಯವನ್ನು ಹೊಡೆದೋಡಿಸಲೆಂದೇ ತನ್ನ ಮಂದೇವರಾದ ಉರುಕುಂದಿ ಈರಣ್ಣನೇ ತನ್ನೊಕ್ಕಲ ಮನೆಯ ಭಾರಿ ಎತ್ತಿಗೆ ಗುಣವಾಗದಂಥ ರೋಗ ಬರಿಸಿರುವನು ಎಂದುಕೊಂಡು ದೇವರ ದಿಕ್ಕಿನ ಕಡೆ ಕೈ ಮುಗಿದು ದೇವರೇ ನೀನು ದೊಡ್ಡೋನು ಎಂದುಕೊಂಡನು. ಆ ಎತ್ತಿನ ದೇಹದಲ್ಲಿರಬಹುದಾದ ಕೊಬ್ಬಿನಿಂದ ಕೂಡಿರುವಂಥ ಮಾಂಸ ರೋಗಕ್ಕೆ ಬಲಿಯಾಗದರಿಲೆಂದು ಮತ್ತೊಮ್ಮೆ ಮಂದೇವರಿಗೆ ಬೇಡಿಕೊಂಡನು." ಎಂದು ಸಾಯಲಿರುವ ಎತ್ತಿನ ಕುರಿತು ಕನಸು ಕಾಣುತ್ತಾನೆ.



ಹಾಗೆ ಯೋಚಿಸುತ್ತಾ ಎತ್ತು ಸತ್ತಿದ್ದರೆ ಶಿವಪೂಜೆಯ ಗೌಡರು ಅವರ ಮನೆಯ ಒಕ್ಕಲಾದ ತನ್ನ ದಾರಿಯನ್ನು ಎದುರು ನೋಡುತ್ತಿರಬಹುದೆಂದುಕೊಂಡನು. ಹಾಗೆಯೇ ಬರುತ್ತಿರುವಾಗ ದಾರಿಯಲ್ಲಿ ಕರಗಲ್ಲು ಕಂಡಿತು. ಆ ಕರಗಲ್ಲಿನ ಮೇಲಿನ ಎಣ್ಣೆಯನ್ನು ನಾಯಿಯೊಂದು ನೆಕ್ಕುತ್ತಿತ್ತು. ಅದನ್ನು ಗಮನಿಸಿದ ರೊಣ್ಣಿ "ಕರಗಲ್ಲು ಬೇರೆ ಅಲ್ಲ, ಪರಮೇಶ್ವರನ ನೆತ್ತಿ ಬೇರೆ ಅಲ್ಲ ಎಂದು ತಿಳಿದವನಾದ ರೊಣ್ಣಿಗೆ ಬಂತು. ಹಚಾ ಎಂದು ಗದರಿಸಿದ. ಎಣ್ಣೆಗೆ ಹಲ್ಲುತ್ತಿದ್ದ ಅದು ಕೇರ್ ಮಾಡದೇ ಗುರ್ರ್ ಅಂತು. ಐನೋರು ನಾಯಿ ತಡವೋದು ಇಷ್ಟವಿರಲಿಲ್ಲ. ಲಕ್ಷಣ ಕಳೆದುಕೊಳ್ಳುವುದು ಇಷ್ಟವಿರಲಿಲ್ಲ. ಮುದಕನ ಕಟ್ಟೆಯಲ್ಲಿ ಎತ್ತು ಕೊಯ್ಯುವಾಗ ಜೊಲ್ಲು ಸುರಿಸುತ್ತ ಅದು ಬಂದಾಗ ತಾನು ತಪ್ಪದೆ ಅದರ ಕಾಲು ಮುರಿದು ಕುಂಟುತ್ತ ಹೋಗುವುದನ್ನು ನೋಡಿ ನಗಬೇಕೆಂದು ನಿಶ್ಚಯಿಸಿದನು". ಇಲ್ಲಿಯೂ ಸಹ ಹಸಿವಿನ ತೀವ್ರತೆಯನ್ನು ಸ್ಪಷ್ಟ ಪಡಿಸಲು ಯತ್ನಿಸಲಾಗಿದೆ. ಹಾಗೆ ಯೋಚಿಸುತ್ತಾ ಬಂದವನು ಗೌಡರ ಮನೆಯ ಕಡೆ ನಡೆಯತೊಡಗಿದನು. ದಾರಿಯಲ್ಲಿ ಬೇವಿನ ಮರದ ಕೆಳಗೆ ಕುಳಿತಿರುವ ಕಟುಕರ ದಯಾನಂದನನ್ನು 'ಎಪ್ಪೋ ತಗುಲಿನ ರೇಟು ಎಂಗೈತಿ' ಎಂದು ಕೇಳುತ್ತಾನೆ. ಹಾಗೆ ಅವನ ಹತ್ತಿರ ಅಡ್ವಾನ್ಸ್ ತೆಗೆದುಕೊಳ್ಳಲು ರೊಣ್ಣಿ ಪ್ರಯತ್ನಿಸಿದನಾದರೂ ಅದು ಸಾಧ್ಯವಾಗದೇ ಹೋಯಿತು. ಹಾಗೆ ಗೌಡರ ಮನೆಗೆ ಅಂಗಳಕ್ಕೆ ಬಂದಾಗ 'ಗೌಡರ ದೇಹ ಬಾಗಿಲಾಚೆ ಇದ್ದಿತು. ಆತನ ಸುತ್ತಮುತ್ತ ಮತ್ತೆ ಕೆಲವರಿರುವುದು ಕಂಡಿತು. ಅವರ ಮಾತಿನ ವಸ್ತು ಎತ್ತೇ ಆಗಿರುವುದು, ಆ ಮಾತುಗಳನ್ನು ಆಲಿಸಿ ತನ್ನ ಪುಣ್ಯಕ್ಕೆ ಎತ್ತು ಸತ್ತಿದೆ ಎಂದು ರೋಮಾಂಚನಗೊಂಡನು. ಎತ್ತಿನ ಕಳೇಬರವನ್ನು ಮುದುಕನ ಕಟ್ಟುವರೆಗೆ ಸಾಗಿಸಲು ತಾನು ಯಾರ, ಯಾರ ಸಹಾಯ ಪಡೆಯಬಹುದೆಂದು ಅವನು ಲೆಕ್ಕ ಹಾಕುತ್ತಿರುವಷ್ಟರಲ್ಲಿ ಗೌಡರು ಹಾಗೇ ನಡೆಯುತ್ತ ಹೊರಗೆ ಬಂದೇ ಬಿಟ್ಟರು. ಬಂದವರೇ ಏನ್ಲೇ ಅಂತ ಮಾತಾಡಿಸಿಯೇ ಬಿಟ್ಟರು'. ಸತ್ತ ಎತ್ತನ್ನು ದೇವರ ಸಮಾನವಾದ್ದರಿಂದ

ಆದೂ ಗೌಡರ ಪ್ರೀತಿಯ ಮನೆಯ ಎತ್ತಾದ್ದರಿಂದ ಅದನ್ನು ಹೂಳಬೇಕೆಂದು ನಿರ್ಧರಿಸುವುದು ಗೌಡರಿಂದ ತಿಳಿದುಬಂದ ರೊಣ್ಣೆಗೆ ಜಂಘಾಬಲವೇ ಉಡುಗಿದಂತಾಯಿತು. ಅಲ್ಲಿಗೂ ರೊಣ್ಣೆ ಪಟ್ಟು ಬಿಡದೆ 'ನಿಮ್ಮಂಥೋರೆ ಇಂಥ ಮಾತಂದ್ರೆ ಎಂಗ್ರಿ ಧಣಿ... ನಾವು ಎಣಾ ತಿಂದು ಬದುಕೋ ಮಂದಿ... ದ್ಯಾವ್ರ ಎಣಾ ಕೊಡಿ ಕ್ವಯ್ದು ತಿಂದು ಬದಿಕಂತೀವಿ ಎಂದು ಮನಸ್ಸಿನಿಂದ ಮಾತುಗಳನ್ನು ಕಿತ್ತಿಟ್ಟನು. ಮೊದಲೇ ಹುಲಿಯಂಥ ಎತ್ತು ಸತ್ತ ಚಿಂತೆಯಲ್ಲಿದ್ದ ಗೌಡ ಓಗ ಓಗಲೇ ಅಂತ ಗದರಿಸಿಬಿಟ್ಟರು. ಎರಡು ಹೆಜ್ಜೆ ಸರಿದು ರೊಣ್ಣೆ ತಿಳ್ದೋರೆ ಇಂಗಂದ್ರೆ ಮಸಿ ಮಾದಿಗ್ರು... ನಾವೆತ್ಲಾಗೆ ಓಗ್ಬೇಕು ಧಣಿ. ನಿಮ್ಮೆಂಜ್ಲು ತಿನ್ನೋ ಅಕ್ಕೃತಿ ಕೇಳ್ತೀವಿ... ಓಗ್ಲಿ... ನಿಂ ಪಾದಕ್ಕೆ ಒಂದ್ಸೇತಿ ಚಮ್ಮಾ ಮಾಡ್ಕೊಡ್ತೀತಿ... ದೇವ್ರ ಎಣ ಕ್ವಡ್ರಿ' ಎಂದು ಅಂಗಲಾಚುತ್ತಾನೆ. ಆದರೆ ಗೌಡರು ಅವನನ್ನು ಗದರಿಸಿ ಕಳಿಸುತ್ತಾರೆ.

ಇದಾದ ನಂತರ ಸಕಲ ಗೌರವ ಪೂಜೆ ಪುನಸ್ಕಾರಗಳಿಂದ ಎತ್ತನ್ನು ಮೆರವಣಿಗೆಯ ಮೂಲಕ ಕೊಂಡೊಯ್ದು ಹೂಳಲಾಗುತ್ತದೆ. ಮೆರವಣಿಗೆಯ ಸಂದರ್ಭದಲ್ಲಿ ರೊಣ್ಣೆ ಕುಡಿದು ಹೋಗಿ ಪ್ರತಿಭಟಿಸುತ್ತಾನೆ. ಆದರೆ ಗೌಡನ ಆಳುಗಳು ಅವನು ಕುಡಿದದ್ದನ್ನು ಕಕ್ಕುವಂತೆ ಹೊಡೆಯುತ್ತಾರೆ. ಆದಾನಂತರ ಸಂಜೆ ರೊಣ್ಣೆ ತುಕ್ಕಿಡಿದು ಮೂಲೆ ಸೇರಿದ್ದ ಮಚ್ಚನ್ನು ಮಸೆದು ಅಣಿಯಾಗುತ್ತಾನೆ.

**ಮುಂದೆ ಮುಂದೆ ರೊಣ್ಣೆ**

**ಹಿಂದೆ ಹಿಂದೆ ಹುಲಿ**

**ಮಣ್ಣಿನೊಳಗಿರುವ ದೇವರ ಹೆಣ ಕೊಳೆತಿರಲಿಕ್ಕಿಲ್ಲ, ತೊಗಲು ಇಸ್ತ್ರಿ ಮಾಡಿದ ಅಂಗಿಯಂತಿರಬಹುದು. ಎಲ್ಲದಕ್ಕಿಂತ ಹೆಚ್ಚಾಗಿ ತನ್ನ ಇಚ್ಛಾಶಕ್ತಿಯೇ ಮಣ್ಣಿನೊಳಗೆ ಕೊಳೆಯುತ್ತಿದೆಯೋ ಎಂಬಂತೆ ಯೋಚಿಸುತ್ತ ಊರ ಮಗ್ಗುಲಾಗಿರುವ ಸಿಂದಗೌಡರ ಕಟ್ಟಿ ಹೊಲ ಸೇರಿದ. ಮೇರೆ ಮೇಲೆ ನಿಂತು ಕಣ್ಣಾಡಿಸಿದ. ಎಲ್ಲೂ ನರಹುಳದ ಸುಳಿವಿರಲಿಲ್ಲ. ಅಲ್ಲಲ್ಲಿ ಕಪ್ಪಲಿನಾಟಗಳ ಊಳಿಡುವ ಸದ್ದು ಬಿಟ್ಟರೆ ಜೀರುಂಡೆಗಳ ಸದ್ದಷ್ಟೇ ಇದ್ದಿತು.**

**ಜೇನ್ನೊಣವೊಂದು ಹೂವರಿಸಿಕೊಂಡು ಹೋಗುವ ರೀತಿಯಲ್ಲಿ ರೊಣ್ಣೆ ಅಡ್ಡಾಡತೊಡಗಿದ. ಸ್ವಲ್ಪೇ ವ್ಯಾಳ್ಯದೊಳಗೆ ದೇವರಿರುವ ಗುದ್ದನ್ನು ಕಂಡು ಹಿಡಿದು ಬಿಟ್ಟನು. ಗುದ್ದಿನ ಮೇಲಿದ್ದ ಇಬತ್ತಿ ಉಂಡೆ, ಕಣಗಿಲೆ ಹೂವುಗಳು ಅವನ ಸಲಿಕೆ ಏಟುಗಳಿಗೆ ತತ್ತರಿಸಿ ಹೋದವು. ಮೈಯೊಳಗೆ ದೆವ್ವ ಹೊಕ್ಕಂಡವನಂತೆ ತೋಡಿ ದೇವರ ಹೆಣ ತಲುಪಿದನು. ದೇವರ ಹೆಣದ ಮೂಲೆ ಮೂಲೆಲೆ ಮೂಸಿ ಗೆಲುವಾದನು. ದೇವರು ಬದುಕಿರುವ ರೀತಿಯಲ್ಲಿಯೇ ಚೆಚ್ಚಗಿರುವುದು, ಸರಿ. ಅವನು ಮಿಂಚಿನಂತೆ, ಚಕ ಚಕ ಅಂತ ದೇವರ ಹೆಣವನ್ನು ಕೊಯ್ಯತೊಡಗಿದನು. ಸ್ವಲ್ಪೇ ಹೊತ್ತಿನಲ್ಲಿ ಕೊಯ್ದು ಕಣ್ಣೆ ಕಣ್ಣೆ ಮಾಂಸವನ್ನು ಪುಟ್ಟಿಗೆ ತುಂಬಿ ಹಸಿತೊಗಲನ್ನು ಮಡಚಿ ಹೊತ್ತುಕೊಂಡನು. ಉಳಿದ ದೇವರನ್ನು ತಿನ್ನಲು ಹುಲಿಯುನ ಸುಪರ್ಧಿಗೆ ಒಪ್ಪಿಸಿದನು. ನಂತರ ಭಲೆ ಸರ್ದಾರ ಎಂಬ ರೀತಿಯಲ್ಲಿ ಮನೆ ಕಡೆ ಹೆಜ್ಜೆ ಹಾಕಿದನು.**

ಮರುದಿನ ಬೆಳಗಿನ ಜಾವವೇ ಎತ್ತಿನ ಚರ್ಮವನ್ನು ಚೀಲದಲ್ಲಿ ಸುತ್ತಿಕೊಂಡು ಕಟುಕರ ದಯಾನಂದನ ಹತ್ತಿರ ಹೋದಾಗ ಅವನು ಇರು ದುಡ್ಡು ತರುತ್ತೇನೆಂದು ಹೋಗಿ ಗೌಡರಿಗೆ ವಿಷಯ ತಿಳಿಸಿ ಗೌಡರ ಮಗನನ್ನು ಕರೆತರಲಾಗುತ್ತದೆ. ಅವನು ಎಲ್.ಎಲ್.ಬಿ. ಫೇಲಾದರೂ ವಕೀಲಿಗಿರಿಯ ಎಲ್ಲಾ ಕಸರತ್ತುಗಳನ್ನು ರೂಢಿಸಿಕೊಂಡವನಾಗಿರುತ್ತಾನೆ. ಆಳುಗಳ ಸಹಾಯದಿಂದ ಅವನನ್ನು ಗೌಡರ ಮನೆಯ ಹತ್ತಿರ ತಂದು ಅವನನ್ನು

ಗೌಡರ ಮನೆಯ ಮುಂದೆ ತಂದು ನಿಲ್ಲಿಸಲಾಯಿತು. ಠೊಣ್ಣಿಯ ಮಕ್ಕಳು ಮರಿ ಸಮೇತ ಇಡೀ ಸಂಸಾರವೇ ಅಳುತ್ತಾ ಗೌಡರ ಮನೆಯ ಮುಂದೆ ಸೇರಿದರು. ಪೊಲೀಸರನ್ನು ಕರೆಕಳುಹಿಸಲಾಯಿತು. 'ಸ್ವಲ್ಪ ಹೊತ್ತಿನ ನಂತರ ಪೊಲೀಸರಿದ್ದ ಜೀಪು ಧೂಳೆಬ್ಬಿಸಿಕೊಂಡು ಬಂದದ್ದೆ ಗಚ್ಚಿನ ಮನೆ ಅಂಗಳದಲ್ಲಿ ಡರ್ ಡಸಕ್ಕಂತ ನಿಂತಿತು. ಆ ಜೀಪಿನಿಂದ ಪೊಲೀಸರಿಬ್ಬರ ಜೊತೆ ಸಬ್ ಇನ್ಸ್‌ಪೆಕ್ಟರ್ ಊರಿಗೆ ಊರೇ ಉಸಿರುಗಟ್ಟುವಂತೆ ಇಳಿದರು. ಗೌಡರು ಖಾಕಿ ಮಂದಿಯನ್ನು ಸ್ವಾಗತಿಸಿ ಕಟ್ಟೆಮೇಲೆ ಕುಂಡ್ರಿಸಿದರು. ಆ ಕ್ಷಣ ಅವರೆಲ್ಲರ ಕರ್ಣಪಟಲ ಹರಿವಂತೆ ಠೊಣ್ಣಿಯ ಕುಟುಂಬ ಸದಸ್ಯರು ಅಯ್ಯೋ ಅಂತ ಎದೆ ಎದೆ ಬಡಿದುಕೊಂಡು ಅಳಲು ಪ್ರಾರಂಭಿಸಿದರು ಮತ್ತು ಪೊಲೀಸರೇ ಅವರನ್ನೆಲ್ಲಾ ಗದರಿಸಿ ಕಳುಹಿಸಬೇಕಾಯಿತು.' ಬಡಕಲಾಗಿದ್ದ ಠೊಣ್ಣಿಯನ್ನು ಪೊಲೀಸರಿಗೆ ಏನೂ ಮಾಡಿಕೊಳ್ಳಲಾಗಲಿಲ್ಲ. ಠೊಣ್ಣಿಯೇ ಪೊಲೀಸರಿಗೆ ತನ್ನನ್ನು ಬಂಧಿಸಿ ಜೈಲಿಗೆ ಕರೆದೊಯ್ಯುವಂತೆ ಆಹ್ವಾನಿಸುತ್ತಾನೆ. ಇದರಿಂದ ಗೌಡ ಇವನು ಪೊಲೀಸ್ ಠಾಣೆಗೆ ಮತ್ತು ಜೈಲಿಗೆ ಹೆದರುವುದಿಲ್ಲವೆಂದು ಗ್ರಹಿಸಿ ಅಧೀರರಾಗುತ್ತಾರೆ. ಕಡೆಗೆ ಅವನಿಗೆ ಹೊಡೆದಾದರೂ ಬುದ್ಧಿ ಹೇಳಿ ಎಂದು ಗೌಡರು ಕೇಳಿಕೊಂಡಾಗ ಸಬ್ ಇನ್ಸ್‌ಪೆಕ್ಟರ್ ಲಾಠಿ ಹಿಡಿದು ಹತ್ತಿರ ಹೋಗಿ ಅವನನ್ನು ಹೊಡೆಯುವ ನೈತಿಕ ಧೈರ್ಯ ಸಾಲದೆ ಹಿಂದೆ ಸರಿಯುತ್ತಾನೆ. ಗೌಡರಿಗೆ ಏನೋ ಸಮಾಧಾನ ಹೇಳಿ ಹೊರಡಲಣಿಯಾದಾಗ ಠೊಣ್ಣಿ ಮತ್ತವನ ಕುಟುಂಬ ತಮ್ಮನ್ನೂ ಕರೆದೊಯ್ಯುವಂತೆ ಜೀಪಿನ ಬೆನ್ನು ಹತ್ತುತ್ತಾರೆ ಎನ್ನುವಲ್ಲಿಗೆ ಕಥೆ ಮುಕ್ತಾಯ ಕಾಣುತ್ತದೆ.

ಮೊದಲನೆಯದಾಗಿ ಈ ಕಥೆಯಲ್ಲಿ ಬರುವ ಪ್ರಾದೇಶಿಕ ಭಾಷೆ, ಶೈಲಿ, ನುಡಿಗಟ್ಟುಗಳು, ವ್ಯಂಗ ಇದೆಲ್ಲವನ್ನೂ ಒಳಗೊಂಡಂತೆ ಕುಂವೀ ಅವರ ಕಥನದ ಶೈಲಿ ಅಧ್ಭುತವೆನ್ನಬಹುದಾದ ಮಟ್ಟಿಗೆ ಇದೆ. ಆದರೆ ಭಾಷೆಯೊಂದನ್ನು ಹೊರತು ಪಡಿಸಿದರೆ ಕಥನದಲ್ಲಿ ಬರುವ ಪ್ರಾದೇಶಿಕ ಅಂಶಗಳು ಎಷ್ಟರ ಮಟ್ಟಿಗೆ ನಿಜವಾದವು ಎನ್ನುವ ಪ್ರಶ್ನೆ ಎದುರಾಗುತ್ತದೆ. 'ಕತ್ತಲನು ತ್ರಿಶೂಲ ಹಿಡಿದ ಕಥೆ'ಯಲ್ಲಿಯಂತೆಯೇ ಇಲ್ಲೂ ಸಹ ಹಸಿವಿನ ಹಿನ್ನೆಲೆಗೆ ಕಥೆಗಾರರು ಕೊಡುವ ಕಾರಣ ವಸ್ತುವಿಗೆ ಪೂರಕವಾಗಿಲ್ಲ. ದಲಿತನೊಬ್ಬ ಸತ್ತದನಕ್ಕಾಗಿ ಸ್ವಾಭಿಮಾನ ತೊರೆದು ಹೂಳಿದ ಎತ್ತನ್ನು ತಿನ್ನುವ ಭೀಕರ ಬರಗಾಲ ಕುಂವೀ ಅವರ ಕಾಲಮಾನದಲ್ಲಿ ಯಾವ ಇಸ್ವಿಯಲ್ಲಿ ಕಾಣಿಸಿಕೊಂಡಿತ್ತು ಎಂಬ ಪ್ರಶ್ನೆ ಉದ್ಭವಿಸುತ್ತದೆ. ಇಂತಹ ನಿಲುವೇ ಲೇಖಕರ ಸಾಮಾಜಿಕ ಬದ್ಧತೆಯನ್ನು ಪ್ರಶ್ನಿಸುವಂತೆ ಮಾಡುತ್ತದೆ. ಕಥೆಯ ವಸ್ತುವಿನ ಆಯ್ಕೆಯಲ್ಲಿ ಮತ್ತು ತಾನು ನಂಬಿದ ಸಾಹಿತ್ಯಿಕ ಚಳವಳಿಯೊಂದರ ಸಿದ್ಧಾಂತಗಳ ಪ್ರತಿಪಾದನೆಗೆ ತಳಸಮುದಾಗಳ ಜೀವನವನ್ನು ಉಚಿತವಲ್ಲದ ರೀತಿಯಲ್ಲಿ ಅರ್ಥೈಸುವ ಪ್ರಕ್ರಿಯೆ ಮಾತ್ರ ಅಪಾಯಕಾರಿಯಾದುದಾಗಿದೆ. ಪ್ರಾದೇಶಿಕ ಭಾಷೆ ಮತ್ತು ನುಡಿಗಟ್ಟುಗಳನ್ನೊಳಗೊಂಡ ಶೈಲಿಯೊಂದಿದ್ದರೆ ಸಾಲದು, ಅದರಾಚೆಗೂ ವಸ್ತುವಿನ ಆಯ್ಕೆ ಮತ್ತು ಅದನ್ನು ನಿಭಾಯಿಸುವ ಸಾಮರ್ಥ್ಯ ಲೇಖಕರಿಗಿರಬೇಕಾಗುತ್ತದೆ.

**೩. ಸಿದ್ದನು ಗುರಿ ಇಟ್ಟದ್ದು**

ಕುಂವೀಯವರ ಭಿನ್ನ ಮತ್ತು ಅಪರೂಪದ ಕಥೆಗಳಲ್ಲಿ 'ಸಿದ್ದನು ಗುರಿ ಇಟ್ಟದ್ದು' ಕಥೆ ಸಹ ಒಂದಾಗಿದೆ. ಮುಗ್ಧ ಬಾಲಕನೊಬ್ಬನ ಮನಸ್ಥಿತಿಯ ಮೂಲಕ ವ್ಯವಸ್ಥೆಯೊಂದರ ಕುರೂಪವನ್ನು ಚಿತ್ರಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಹಾಸ್ಯ, ವ್ಯಂಗ ಮತ್ತು ವಿಡಂಬನೆ, ಪ್ರಾದೇಶಿಕ ನುಡಿಗಟ್ಟುಗಳನ್ನೊಳಗೊಂಡ ಕುಂವೀಯವರ ಶೈಲಿ ಆದ್ಯಂತವಾಗಿ ಕುತೂಹಲಕಾರಿಯಾಗಿದೆ. ಚೇತೋಹಾರಿಯಾಗಿದೆ ಮತ್ತು ಲವಲವಿಕೆಯಿಂದ ಕೂಡಿದೆ.

> **ಕೊಟ್ರಪ್ಪ ಮಾಸ್ತರರು ನಿನ್ನೆ ದಿನ ಸಾಲೆಯಲ್ಲಿ ಜೀವಸತ್ವಗಳು ಎಂಬ ಪಾಠಕ್ಕೆ ಸಂಬಂಧಿಸಿದಂತೆ ಮೀನುಗಳ ಬಗ್ಗೆ ವಿವರವಾಗಿ ಹೇಳಿದ್ದು ಕೇಳಿ ದಿವಂಗತ ಬಡಕಲರ ಲಸುಮನ ಐದನೆಯ ಮಗ ಸಿದ್ದ ತುಂಬ ಉಲ್ಲಸಿತನಾಗಿದ್ದನು. ಅವನ ತಲೆಕಾಯಿಯೊಳಗೆ ಮಾಸ್ತರರು ಆಡಿದ ಪ್ರತಿ ಮಾತುಗಳೆಲ್ಲ ಮೀನುಗಳಾಗಿ ಈಜಾಡತೊಡಗಿದ್ದವು. ಮೀನು ತಿಂದರೆ ಶಕ್ತಿ ಬರುತ್ತದೆ ಎಂಬುದು ಕುಂಡಿಯಲ್ಲಿ**

ಅರಪಾವು ಮಾಂಸವಿರದಿದ್ದ ಸಿದ್ದಗೆ ಪದೇ ಪದೇ ನೆನಪಾಗಿ ಮುಖದ ಪೊಟರೆಯಾದ ಬಾಯಿಯಿಂದ ಜೊಲ್ಲು ಹನಿ ಹನಿಯಾಗಿ ತೊಟ್ಟಿಕ್ಕತೊಡಗಿತ್ತು. ತೊಟ್ಟಿಕ್ಕಿದ ರಸವು ಕಳೆದ ವರ್ಷ ಕೊಟ್ರೇಶನ ಕಾರ್ತಿಕದಂದು ತೊಟ್ಟುಕೊಂಡಿದ್ದ ನಶೆಪುಡಿ ಬಣ್ಣದ ಮೊಂಡು ತೋಳಿನ ಅಂಗಿಯ ಮೇಲೆ ಯಾವುದೋ ದೇಶದ ಮ್ಯಾಪೊಂದು ರಚನೆ ಮಾಡಿತ್ತು. ಅದು ಒಮ್ಮೊಮ್ಮೆ ಭಾರತದಂತೆಯೂ, ಒಮ್ಮೊಮ್ಮೆ ಅಮೇರಿಕದಂತೆಯೂ ಕಂಡು ಬಂದಿತು. ಆ ಮ್ಯಾಪು ಪರಮೆಂಟಾಗಿರಿಸಲು ಸಿದ್ದ ಪ್ರಯತ್ನಿಸಿದ ಸೊಲುಪ ಹೊತ್ತಿಗೆ ಒಣಗಿ ಮಾಯವಾಯಿತು. ಅಮೇರಿಕದಂತೆ ಕಾಣಿಸುತ್ತಿದ್ದ ಆ ಮ್ಯಾಪು ಸೊಲುಪ ಹೊತ್ತು ಅಂಗಿ ಮೇಲೆ ಇದ್ದರೂ ಹೊಟ್ಟೆ ತುಂಬಿದಂತೆಯೂ, ಮೈಯೊಳಗೆ ಶಕ್ತಿ ತುಣುಕಾಡಿದಂತೆಯೂ ಸಿದ್ದ ಕಲ್ಪಿಸಿಕೊಂಡ ಪರಿಣಾಮವಾಗಿ ಕೆಲವು ಕ್ಷಣ ಗೆಲುವಾಗಿದ್ದನು. ಏನು ಮಾಡುವುದು ದೇವರು ಅವನ ಹಣೆಯ ಮೇಲೆ ನಸೀಬನ್ನು ಪೆನ್ನು, ಸೀಸದ ಕಡ್ಡಿಯಿಂದ ಬರೆಯದೆ ಕತ್ತೆ ಗೆಂಡೆಯಿಂದ ಬರೆದಿರುವನೆಂದು ಕೊಟ್ರಪ್ಪ ಮಾಸ್ತರರು ಸಾಲೆಯಲ್ಲಿ ಸಿದ್ದನ ಅಲಚಿಪ್ಪಾಕಾರದ ಮುಖ ನಯನಮನೋಹರವಾಗಿ ಕಂಡ ಕೂಡಲೆ ಅಂದು ಬಿಡುವುದು ಮಾಮೂಲು ಸಂಗತಿ. ಒಂದನೆಯ ತರಗತಿಯ ಮೊಲೆ ಚೀಪುವ ಹುಡಗರು ತಂತಮ್ಮ ಸಿಲೇಟುಗಳಲ್ಲಿ ತಾವು ಕಲಿತು ಗೀಚಿದ ಅಕ್ಷರಗಳಲ್ಲಿ, ಗೆರೆಗಳಲ್ಲಿ ಸಿದ್ದನ ಮುಖದಲ್ಲಿ ಮಡುಗಟ್ಟಿವೆ ಎಂದು ಖಾತ್ರಿಯಾಗುವ ರೀತಿಯಲ್ಲಿ ಬೆವರಿನ ಗೆರೆಗಳು, ಸಿಂಬಳ ಹರಿದಾಡಿದ ಅಂಕು ಡೊಂಕು ರಸ್ತೆಗಳು ಬೆಳಗಿನ ಎಳೆ ಬಿಸಿಲಿಗೆ ಫಳ ಫಳ ಹೊಳೆದು ಬಿಡುವವು. ಇಂಥ ಅನೇಕ ಕಾರಣಗಳಿಂದಾಗಿ ಸಿದ್ದನು ತನ್ನ ಶಾಲಾ ಸಾಮಾಗ್ರಿಗಳೊಂದಿಗೆ ಒಂದು ಮೂಲೆಯಲ್ಲಿ ಕೂತಿದ್ದೇ ಐದನೆಯ ಕಿಲಾಸು ಕಲಿಯುತ್ತಿರುವನು. ಸಯನಿಸು ಪಾಠ ಮಾಡುವಾಗ್ಗೆ ಕೊಟ್ರಪ್ಪ ಮಾಸ್ತರರು ಮೀನುಗಳೆಂಬ ಶಬುದ ಉಚ್ಚರಿಸಿದ್ದೆ ಮುಂದಿನ ಸಾಲಿಗೆ ಓಡಿ ಬಂದಿದ್ದನು. ತನ್ಮಯವಾಗಿ ಪಾಠ ಕೇಳುತ್ತಿದ್ದನು. ಮೀನುಗಳು ಕಿವಿಯಿಂದ ಉಸುರಾಡುತ್ತವೆ ಎಂಬೊಂದು ಸೆಂಟೆನ್ಸನ್ನು ಪ್ರಾಣಿಗಳು ಕಿವಿಯಿಂದ ಉಸಿರಾಡುವ ಮೀನುಗಳಂಥ ಜಲಚರಗಳನ್ನು ತಿಂದು ಶಕ್ತಿ ಹೆಚ್ಚಿಸಿಕೊಳ್ಳುತ್ತವೆ ಎಂದು ಜಾಣ್ಮನದಿಂದ ಯೋಚಿಸಿದನು. ಕಿವಿ ಸಂದಿಯಲ್ಲಿ ಬೀಡಿ ಇಟ್ಟುಕೊಂಡು ಅಡ್ಡಾಡುವ ಹಮಾಲಿ ಅಮಡ್ಯಾ, ಕಿವಿ ಸಂದಿಯಲ್ಲಿ ಪೆನ್ಸಿಲ್ಲನ್ನು ಇಟ್ಟುಕೊಂಡು ತಿರುಗಾಡುವ ಅಂಗಡಿ ರುದ್ರಪ್ಪನೂ ವಿನಾಕಾರಣ ನೆನಪಾಗಿ ಅವನ ಕಣ್ಣು ತುಂಬ ಮಂಜುಗವಿದರು.

ಹೀಗೆ ಮೀನಿನ ಕುತೂಹಲದಿಂದ ಸಿದ್ದನು ಒಣಗಿರುವ ಕೆರೆ, ಹಳ್ಳದಂಗಳಗಳು ಎಲ್ಲವೂ ಬಿರುಕುಗಳಿಂದಲೇ ತುಂಬಿರುವುದರಿಂದ ಮೀನು ಸಿಗುವ ತಾಣವನ್ನು ಪತ್ತೆ ಹಚ್ಚುವ ವರ್ಣನೆ ಬರುತ್ತದೆ.. ಮಠದ ವಕ್ರಾಣಿಯಲ್ಲಿ ಸಮೃದ್ಧವಾಗಿ ಮೀನಿರುವುದನ್ನು ಕಂಡುಕೊಂಡನು. ಹೀಗೆ ಮೀನು ಕಂಡುಕೊಳ್ಳುವ ಮಧ್ಯೆ ಶಿಸ್ತಿನ ಸಿಪಾಯಿಗಳಂತೆ ಕೂತು ಮಂತ್ರಪಠಿಸುತ್ತಿದ್ದ ಮಠದಲ್ಲಿ ಕಲಿಯುತ್ತಿದ್ದ ಹುಡುಗರನ್ನೂ ಎತ್ತರವಾದ ವೇದಿಕೆಯ ಮೇಲೆ ಕೂತಿದ್ದ ದೊಡ್ಡ ಸ್ವಾಮಿಗಳವರ ಭವ್ಯ ವ್ಯಕ್ತಿತ್ವವನ್ನೂ ನೋಡಿ ದಂಗಾಗಿ ತನ್ನ ಹೆಸರೂ ಸಿದ್ದ ಎಂದಿರುವುದರ ಬಗೆಗೆ ಯೋಚಿಸುತ್ತಾನೆ. ಹಾಗೆ ಯೋಚಿಸುತ್ತಾ ವಕ್ರಾಣಿಯ ಹತ್ತಿರ ಯಾರೂ ಇಲ್ಲದ್ದನ್ನು ಕಂಡು ಮೆಟ್ಟಿಲಿಳಿದು ಅದರಲ್ಲಿ ತಂಗಿನ ಹಾಲಿನಂತಹ ನೀರನ್ನು ಕಂಡು ಜೊತೆಗೆ ಅದರಲ್ಲಿ ಮೀನುಗಳಿರುವುದನ್ನು ಗಮನಿಸಿ ಪುಳಕಿತನಾದನು. ಹಾಗೆಯೇ ಕ್ಯಾಕರಿಸಿ ನೀರಿಗೆ ಉಗಿದಾಗ ಉಗಿದ ಕಫಕ್ಕೆ ಮೀನುಗಳು ಮುತ್ತಿಕೊಳ್ಳುವುದನ್ನು ಗಮನಿಸುತ್ತಾನೆ. ನಂತರ ಮನೆಗೆ ಬಂದು ಗಾಳವನ್ನು ಹುಡುಕಿ ಅದನ್ನು ರಿಪೇರಿಗೊಳಿಸಿ ಗಾಳಕ್ಕೆ ಬೇಕಾದ ಎರೆಹುಳಗಳನ್ನು ಹುಡುಕಿ ಮೀನು ಹಿಡಿಯುತ್ತಿದ್ದಾಗ ಮರಿಸ್ವಾಮಿಗಳಿಗೆ ಸಿಕ್ಕು ಬೀಳುತ್ತಾನೆ. ನಂತರ ಮಠಕ್ಕೆ ಎಳೆ ತಂದ ಸಿದ್ದನಿಗೆ

ಹೊಡೆತಗಳು ಬೀಳುತ್ತವೆ. ಆಮೇಲೆ ದೊಡ್ಡ ಸ್ವಾಮಿಗಳ ಬಳಿಗೆ ಕರೆದೊಯ್ಯುತ್ತಾರೆ. ಅವರೂ ಸಹ ಬೂಟು ಗಾಲಿನಿಂದ ಸಿದ್ದನನ್ನು ಒದೆಯುತ್ತಾರೆ. ಒದೆ ತಿಂದ ಸಿದ್ದ ಕ್ರಮೇಣ ಆ ನೋವನ್ನು ಮರೆತು ಗೆಲುವಾಗುತ್ತಾನೆ. ಆಗಿರುತ್ತಿರುವಾಗ ಒಂದು ದಿನ ಸ್ವಾಮಿಗಳ ಅಡ್ಡಪಲ್ಲಕ್ಕಿ ಮಹೋತ್ಸವ ಜರುಗುತ್ತದೆ. ಆ ಕಥನದ ಭಾಗ ಈ ಕೆಳಗಿನಂತಿದೆ.

> ಹೀಗಿರುತ್ತಿರಲಾಗಿ ಸಿದ್ದರ ಮಠದ ಅಡ್ಡಪಲ್ಲಕ್ಕಿ ಉತ್ಸವ ಅದೇ ಊರಲ್ಲಿ ನಡೆಯಲಿರುವುದು ತಿಳಿದು ಸಿದ್ದನ ಆನಂದಕ್ಕೆ ಪಾರವೇ ಇರಲಿಲ್ಲ. ಮೆರವಣಿಗೆ ತೇರು ಬಜಾರದ ಮೂಲಕ ಬಸಂದೇವರ ಗುಡಿ ಕಡೆಗೆ ನಡೆಯುತ್ತದೆಂಬುದನ್ನು ಸೂಕ್ಷ್ಮಮತಿಯಾದ ಆ ಬಾಲಕನು ತಳಿರು ತೋರಣಗಳಿಂದ ಸಿಂಗರಿಸಿದ ಬೀದಿಗಳನ್ನು ನೋಡುತ್ತಲೇ ತಿಳಿದನು. ಊರು ತುಂಬ ಭಕ್ತಿ ಎಂಬ ಹಾಲಿನ ಹೊಳೆ ತುಳುತುಳುಕಾಡಿತು.
>
> ಜಯಾ ನಮ ಪಾರೂತಿ ಪತಿ ಹರಹರ ಮಾದೇವ, ಸಿದ್ದರ ಮಠದ ಶಿವಕುಮಾರ ಸ್ವಾಮಿಗಳಿಗೆ ಜಯವಾಗಲಿ ಎಂಬಿತ್ಯಾದಿ ಘೋಷಣೆಗಳು ಮುಗಿಲಿಗೆ ಮುಟ್ಟಿದ್ದವು. ಸಿದ್ದರ ಮಠದ ದೊರೆಯೇ ನಿನಗಾರು ಸರಿಯೇ, ಸರಿ ಅಂದವರ ಹಲ್ಲು ಮುರಿಯೇ ಬಹುಪರಾಕ್ ಎಂಬುದಾಗಿ ಅಡ್ಡಪಲ್ಲಕ್ಕಿ ಹೊತ್ತವರಾದಿಯಾಗಿ ಎಲ್ಲರೂ ಧ್ವನಿಗೈಯುತ್ತಲೇ ಇದ್ದರು. ಇಂಥ ಘೋಷಣೆ ವೈಭವಗಳ ನಡುವೆ ಅಡ್ಡಪಲ್ಲಕ್ಕಿಯ ಮೇಲೆ ಮಂದಸ್ಮಿತರಾಗಿ ಆಶೀರ್ವಾದದ ಭಂಗಿಯಲ್ಲಿ ವಿರಾಜಮಾನರಾಗಿದ್ದರು ಸ್ವಾಮಿಗಳು.
>
> ಇನ್ನೇನು ಮೆರವಣಿಗೆ ವಂಕದಾರಿಯವರ ಅಂಗಡಿ ಮುಂದಕ್ಕೆ ಬಂದಿತು... ನಿನಗಾರು ಸರಿಯೇ ಬಹುಪರಾಕ್ ಎಂದು ಮೊಳಗುವುದರೊಳಗಾಗಿ ಯಮ ದಿಕ್ಕಿನಿಂದ ಒಂದು ಹಿಡಿಗಾತ್ರದ ಕಲ್ಲೊಂದು ರಾಮ ಬಿಟ್ಟ ಬಾಣದಂತೆ ಬಂದಿದ್ದೇ ಅಡ್ಡಪಲ್ಲಕ್ಕಿ ಮೇಲಿದ್ದ ಸ್ವಾಮಿಗಳ ಹಣೆಗೆ ಬಡಿಯಿತು. ಅಲ್ಲಿ ಬುರ ಬುರ ಊದತೊಡಗಿದ ಬುಗುಟೆಯು ಕಡೆಗೆ ಕೆಲವರು ಹಾಹಾಕಾರಗೈಯುತ್ತ ನೋಡುತ್ತಿದ್ದರೆ, ಇನ್ನೂ ಕೆಲವರು ಅರ್ಧ ಬಲ ಬೆನ್ನು ಮಾಡಿ ಓಡುತ್ತಿದ್ದ ಹುಡಗನನ್ನು ನೋಡುತ್ತಿದ್ದರು.

ಮುಗ್ಧ ಬಾಲಕ ಸಿದ್ದನ ಮೂಲಕ ಸಾಂಪ್ರದಾಯಿಕ ವ್ಯವಸ್ಥೆಯನ್ನು ವಿಡಂಬಿಸುವ ಪ್ರಯತ್ನ ಈ ಕಥೆಯಲ್ಲಿದೆ. ಕಥೆಯಲ್ಲಿನ ಪ್ರಾದೇಶಿಕ ನುಡಿಗಟ್ಟುಗಳನ್ನೊಳಗೊಂಡಂತೆ ಒಟ್ಟಾರೆ ಕತೆಯ ಶೈಲಿಯು ಆಡು ನುಡಿಯನ್ನು ಸಮರ್ಪಕವಾಗಿ ಬಳಸಿಕೊಂಡದ್ದಾಗಿದೆ. ಆದರೆ ಹಾಸ್ಯ, ವ್ಯಂಗ್ಯ ಹಲವಡೆ ಅಗತ್ಯಕ್ಕಿಂತ ಅತಿಯಾದಂತೆಯೂ ಅನ್ನಿಸದೇ ಇರದು. ಉದಾಹರಣೆಗೆ "ಅವನ ತಲೆಕಾಯಿಯೊಳಗೆ ಮಾಸ್ತರರು ಆಡಿದ ಪ್ರತಿ ಮಾತುಗಳೆಲ್ಲ ಮೀನುಗಳಾಗಿ ಈಜಾಡತೊಡಗಿದ್ದವು. ಮೀನು ತಿಂದರೆ ಶಕ್ತಿ ಬರುತ್ತದೆ ಎಂಬುದು ಕುಂಡಿಯಲ್ಲಿ ಅರಪಾವು ಮಾಂಸವಿರದಿದ್ದ ಸಿದ್ದಗೆ ಪದೇ ಪದೇ ನೆನಪಾಗಿ ಮುಖದ ಪೊಟರೆಯಾದ ಬಾಯಿಯಿಂದ ಜೊಲ್ಲು ಹನಿ ಹನಿಯಾಗಿ ತೊಟ್ಟಿಕ್ಕತೊಡಗಿತ್ತು. ತೊಟ್ಟಿಕ್ಕಿದ ರಸವು ಕಳೆದ ವರ್ಷ ಕೊಟ್ರೇಶನ ಕಾರ್ತಿಕದಂದು ತೊಟ್ಟುಕೊಂಡಿದ್ದ ನಶೆಪುಡಿ ಬಣ್ಣದ ಮೊಂಡು ತೋಳಿನ ಅಂಗಿಯ ಮೇಲೆ ಯಾವುದೋ ದೇಶದ ಮ್ಯಾಪೊಂದು ರಚನೆ ಮಾಡಿತ್ತು. ಅದು ಒಮ್ಮೊಮ್ಮೆ ಭಾರತದಂತೆಯೂ, ಒಮ್ಮೊಮ್ಮೆ ಅಮೇರಿಕದಂತೆಯೂ ಕಂಡು ಬಂದಿತು. ಆ ಮ್ಯಾಪು ಪರಮೆಂಟಾಗಿರಿಸಲು ಸಿದ್ದ ಪ್ರಯತ್ನಿಸಿದ ಸೊಲುಪ ಹೊತ್ತಿಗೆ ಒಣಗಿ ಮಾಯವಾಯಿತು. ಅಮೇರಿಕದಂತೆಯೂ, ಮೈಯೊಳಗೆ ಶಕ್ತಿ ತುಳುಕಾಡಿದಂತೆಯೂ ಸಿದ್ದ ಕಲ್ಪಿಸಿಕೊಂಡ ಪರಿಣಾಮವಾಗಿ ಕೆಲವ ಕ್ಷಣ ಗೆಲುವಾಗಿದ್ದನು..." ಹೀಗೆ ಹರಟೆಯ ಸ್ವರೂಪವು ಸಣ್ಣಕಥೆಯ ಗಾಂಭೀರ್ಯವನ್ನು ಹಾಳುಗೆಡವುತ್ತಲ್ಲದೆ ಕಥೆಯ ಮೂಲ ಉದ್ದೇಶವನ್ನೇ

ಮರೆಸುತ್ತದೆ.

೪. ಈಡಾಪಿಂಗಳ ಸುಷುಮ್ನನಾಳ ಮಧ್ಯದ ಕೂಗು

ಕುಂವೀ ಅವರ ಈ ಕಥೆಯು ಅವರ ಉಳಿದೆಲ್ಲಾ ಕಥೆಗಳಿಗಿಂತ ಭಿನ್ನವಾಗಿರುವುದಲ್ಲದೆ ಪ್ರಬುದ್ಧ ನಿರೂಪಣೆಯಿರುವ ಕಥೆಯಾಗಿದೆ. ಕುಂವೀ ಅವರು ನಿಜಕ್ಕೂ ಬರೆಯಬೇಕಾದ ಬಗೆ ಹೀಗೆಯೇ ಇರಬೇಕು ಎನ್ನುವಷ್ಟರ ಮಟ್ಟಿಗೆ ಕಥೆ ಅಚ್ಚುಕಟ್ಟಾದ ನಿರೂಪಣೆಯನ್ನು ಹೊಂದಿದೆ. ನಿರೂಪಕನಾಗಿ ಕಥೆಗಾರರು ಕಥೆಯನ್ನು ನಿರೂಪಿಸುವಲ್ಲಿ ವಹಿಸಿದ ಸಂಯಮ ಪ್ರಶಂಸಾರ್ಹವಾಗಿದೆ. ಉಳಿದ ಕಥೆಗಳಲ್ಲಿಯಂತೆ ಎಲ್ಲಿಯೂ ಅತಿರೇಕದ, ಅತಿರಂಜಿತ ಬರವಣಿಗೆಯ ಶೈಲಿಯಿರದೆ ಸರಳವಾದ ತಿಳಿ ಹಾಸ್ಯದಿಂದ ಕೂಡಿದ ಬರವಣಿಗೆಯಾಗಿದೆ. ಇಲ್ಲಿನ ಶೈಲಿಯು ತೇಜಸ್ವಿಯವರನ್ನು ನೆನಪಿಸುವಂತಿದೆ.

ನಿರೂಪಕರು ಕೊಲೆಗಾರನೊಂದಿಗೆ ಹೊಂದಿದ್ದ ಸಂಬಂಧದಿಂದಾಗಿ ಅವರು ಕೆಲಸ ಮಾಡುತ್ತಿದ್ದ ಹಳ್ಳಿಯ ಜನ ಆ ಕೊಲೆಗಾರ ಕೊಲೆಗೀಡಾದಾಗ ನಿರೂಪಕನೇ ಕೊಲೆಗಾರನೆಂಬುದಾಗಿ ಅನುಮಾನಿಸುತ್ತಾರೆ. ಆಂಧ್ರದ ಗಡಿಭಾಗದ ಹಳ್ಳಿಯೊಂದರಲ್ಲಿ ಈ ಘಟನೆ ನಡೆದಿದೆ. ಕೊಲೆಯಾಗಿ ಬಿದ್ದಿರುವ ನಾರಾಣಿಯ ಹೆಣದ ಸುತ್ತಲೂ ಗುಂಪು ನೆರೆದಿದೆ.

> "ಗುಂಪಿನಲ್ಲಿ ಗೌಡ, ಕುಲಕರ್ಣಿ ಕಾಣಿಸಿಕೊಂಡಿರುವರು. ಅವರು ನಾಲ್ಕು ಮಂದಿ ತಳವಾರರನ್ನು ನನ್ನ ಸುತ್ತ ಕಾವಲಿಡಲಾಗಿದೆ. ತಳವಾರರೆಂದರೆ ತಳವಾರರು! ಕುರಿಯೊಂದನ್ನು ಕಾಯಲು ನಾಲ್ಕು ತೋಳಗಳು. ಮೊನ್ನೆ ನಡೆದ ಘಟನೆಯನ್ನು ಅನುಲಕ್ಷಿಸಿ ಕೊಲೆಯ ಪಟ್ಟಿ ನನ್ನ ತಲೆಗೆ ಕಟ್ಟಿರುವುದು ಅಂಗೈಯಷ್ಟೆ ಸ್ಪಷ್ಟ. ನಾನು ಅವತ್ತು ತಾಳ್ಮೆಯನ್ನು ಸಂದರ್ಭಕ್ಕೆ ಬಲಿಕೊಡಬಾರದಿತ್ತು; ಆಗುವುದು ಆಗಿ ಹೋಗಿದೆ! ಉಳಿದಿರುವುದೆಂದರೆ ಈ ಅಪವಾದದಿಂದ ಮುಕ್ತನಾಗುವ ಮಾರ್ಗ ಹುಡುಕುವುದು. ಮಾರ್ಗ ಸರಳವಾಗಿಲ್ಲ. ಅಲ್ಲದೆ ಇದು ಮಾತೃರಾಜ್ಯವಲ್ಲ. ಹತ್ತಿರದಿಂದ ಬಲ್ಲವರೊಬ್ಬರೂ ಈ ನಾಲ್ಕು ಸಾವಿರ ಮನೆಗಳಲ್ಲಿಲ್ಲ. ನಾನಿದ್ದ ಎರಡು ವರ್ಷದವಧಿಯಲ್ಲಿ ಊರೊಳಗೆ ಅಡ್ಡಾಡಿ ಕಾಲಕ್ಷೇಪ ಮಾಡಿರಲಿಲ್ಲ. ಆದ್ದರಿಂದ ಜನ ನನಗೆ ಹತ್ತಿರ ಹೇಗಾದಾರು! ಊರ ರಾಜಕೀಯದ ಬಗ್ಗೆ ಮಾತನಾಡಲು ನಾನು ಕುಲಕರ್ಣಿ ರಾಮಣ್ಣನ ಹಿಂದೆ ತಿರುಗಲಿಲ್ಲ. ವೀರನಗೌಡ ನಡೆಸುತ್ತಿರುವ ಕ್ಲಬ್ಬಿನಲ್ಲಿ ಕೂತು ಇಸ್ಪೀಟು ಆಡಲಿಲ್ಲ. ಗ್ರಾಮದ ಕೆಲವು ಹಿರಿಯರೂ ಅಷ್ಟೆ; ನನ್ನನ್ನು ಹೆಣದೊಂದಿಗೆ ಸಮೀಕರಿಸಿ ಮಾತಾಡತೊಡಗಿದರು. ಗಾಯತ್ರಿ ಮಂತ್ರವನ್ನು ನಡು ನೀರಿನಲ್ಲಿ ಕೈ ಬಿಟ್ಟು ಬಂದ ನಮ್ಮ ಹೆಡ್ ಮಾಸ್ಟರ್ ಲಕ್ಷ್ಮೀ ನರಸಯ್ಯನನ್ನು ಗೌಡ ಕುಲಕರ್ಣಿ ಆದರದಿಂದ ಬರಮಾಡಿಕೊಂಡರು. ಮೊದಲೇ ನಮ್ಮ ಹೆಚ್ಚೆಮ್ ಅಂಗಿಯೊಳಗೆ ಹಲ್ಲಿ ತೂರಿದಂತೆ ಶತಪದಿಯಂತೆ ವರ್ತಿಸುವ ಗೊಂದಲ ಮನಸ್ಸಿನಾತ... ಈತನನ್ನು ನೋಡಿ ಎರಡು ವರ್ಷದ ಹಿಂದೆಯೇ ಮುಂದೆ ಹೀಗೆ ನಡೆಯಬಹುದೆಂದುಕೊಂಡಿದ್ದೆನೆಂದು ಬೀಡಿ ಹಚ್ಚಿಕೊಂಡ. ತಮ್ಮ ಶಿಕ್ಷಣ ಸಂಸ್ಥೆಗೆ ಅಂತೂ ಕೆಟ್ಟ ಹೆಸರು ತಂದೆಯಲ್ಲೋ ಎಂದು ಶಪಿಸಿದ. ಪೊಲೀಸರು ಬಂದು ಒಳಗೆ ಹಾಕಿ ಒದೆಯುತ್ತಾರೆಂದು ಜನರು ಮೆಚ್ಚುವಂತೆ ಮಾತಾಡುವಾಗ ನನ್ನ ಸಹೋದ್ಯೋಗಿ ಶೀನಪ್ಪ ಬಂದದ್ದು. ಬಂದ ಕೂಡಲೆ ಸರಕಾರಿ ನೌಕರರಾದ ನಾವೆಲ್ಲಾ ಒಂದೇ; ನೀವು ಊರವರ ಪರ ವಹಿಸಿ ಮಾತಾಡುವಿರಲ್ಲಾ ಎಂದು ಹೆಚ್ಚೆಮ್‌ನನ್ನು ತರಾಟೆ ತೆಗೆದುಕೊಂಡ. ಅವರಿಬ್ಬರು ಪರಸ್ಪರ ವಾದಿಸಿದರು. ಸೀನಿಯಾರಿಟಿ ಪ್ರಕಾರ ನೋಡಿದರೆ ಶೀನಪ್ಪ ನಮ್ಮ ಹೈಸ್ಕೂಲು ಹೆಚ್ಚೆಮ್ಮಾಗ ಬೇಕಿತ್ತು. ಊರಿನ

> ರಾಜಕೀಯದಿಂದಾಗಿ ಅದು ಆತನ ಕೈ ತಪ್ಪಿತ್ತು. ಅವರಿವರ ಮಧ್ಯೆ ಏನೇ ಇರಲಿ ಒಬ್ಬರಾದರೂ ನನ್ನ ಪರವಾಗಿ ಮಾತಾಡುವವರಿರುವರಲ್ಲ ಎಂಬುದಷ್ಟೇ ನನಗೆ ಸಮಾಧಾನವಾಗಿತ್ತು. ಶೀನಪ್ಪ ಇರದಿದ್ದರೆ ಅಥವಾ ಇದ್ದೂ ಆಸ್ಥೆ ವಹಿಸಿ ಬಾರದಿದ್ದಲ್ಲಿ ನಾನು ಕೂತಲ್ಲಿಯೇ ನಾಮಾವಶೇಷವಾಗುತ್ತಿದ್ದೆನೇನೋ?.

ಹೀಗೆ ಸಾಗುವ ನಿರೂಪಣೆಯು ಯಾವುದೇ ಉದ್ವಿಗ್ನತೆಯಿಲ್ಲದೆ ಘಟನೆಗಳನ್ನು ನಿರೂಪಿಸುತ್ತಾ ಸಾಗುತ್ತದೆ. ನಿರೂಪಕರು ಕೊಲೆಗೀಡಾದ ನಾರಾಣಿ ಭೇಟಿಯಾದ ಸಂದರ್ಭವನ್ನು ವಿವರಿಸುತ್ತಾರೆ. ನಿರೂಪಕರು ಕೆಲಸ ಮಾಡುತ್ತಿರುವ ಪೆದ್ದಕಡುಬೂರಿನಿಂದ ಹೊಳಲುಗುಂದಿ ಕಡೆಗೆ ಹೋಗುವಾಗ ನಿರ್ಜನ ಪ್ರದೇಶವೊಂದರಲ್ಲಿ ನಾರಾಣಿ ಇವರನ್ನು ಸಂಧಿಸುತ್ತಾನೆ. ತಾನು ವಾರ-ಹತ್ತು ದಿನಗಳ ಹಿಂದೆ ಆಕೆಳ್ಳ ವೆಂಕಟೇಶ್ವರರಾವ್‌ನನ್ನು ಕೊಲೆ ಮಾಡಿದ ವ್ಯಕ್ತಿ ತಾನೆಂದು ಬಾಳೆ ಹಣ್ಣು ಸುಲಿದಂತೆ ನುಡಿಯುತ್ತಾನೆ. ಸಾಕ್ಷಿಯಾಗಿ ಬಟ್ಟೆಯ ಮೇಲಿದ್ದ ರಕ್ತದ ಕಲೆಗಳನ್ನು ಚಾಕನ್ನು ಸಹ ತೋರಿಸುತ್ತಾನೆ. ಆದರೆ ನಿರೂಪಕರು ಅವನು ತೋರಿಸಿದ ಚೂರಿಗೆ ಹೆದರುವುದಿಲ್ಲ. ಅಪರಿಚಿತ ನಿರೂಪಕರನ್ನು ಕೈಹಿಡಿದು ಕಣ್ಣೀರಿಟ್ಟ. ಬಹುಶಃ ಅವನು ಮಾಡಿದ ಕೊಲೆಗಳ ಪಾಪಪ್ರಜ್ಞೆಯಿಂದಿರಬಹುದು. ನಿರೂಪಕರು ಇದಕ್ಕೆ ಕರಗಿಹೋಗುತ್ತಾರೆ. ಹೀಗೆ ಬೆಳೆದ ಇವರಿಬ್ಬರ ಒಡನಾಟ ಪರಸ್ಪರ ಸ್ನೇಹ ವಿಶ್ವಾಸಗಳಿಗೆ ಎಡೆ ಮಾಡಿಕೊಡುತ್ತದೆ. ನಂತರದ ದಿನಗಳಲ್ಲಿ ನಿರೂಪಕರಿಂದ ಕುಡಿತಕ್ಕೆ ದುಡ್ಡು ಕೇಳುವುದು ಅದು ಕುಡಿತಕ್ಕೆ ಎಂದು ತಿಳಿದಾದ ಮೇಲೆ ನಿರೂಪಕರು ಇನ್ನು ಮೇಲೆ ಕೊಡುವುದಿಲ್ಲವೆಂದು ಹೇಳುತ್ತಾರೆ. ಆದರೆ ಯಾವ್ಯಾವುದೋ ಕಾರಣಗಳನ್ನು ಹೇಳಿ ದುಡ್ಡು ಕೀಳತೊಡಗಿದ ನಾರಾಣಿ ಕ್ರಮೇಣ ಜಗಳಗಂಟತನವನ್ನು ಪ್ರಕಟಿಸುತ್ತಾನೆ. ಒಮ್ಮೆ ನಿರೂಪಕರೂ ಮತ್ತು ನಾರಾಣಿ ಇಬ್ಬರೂ ಈ ಸಂಬಂಧ ಕೈ ಕೈ ಮಿಲಾಯಿಸುತ್ತಾರೆ. ಆದಾದ ಮೂರು ದಿನಗಳ ನಂತರ ದೇವಸ್ಥಾನವೊಂದರ ಮುಂದೆ ನಾರಾಣಿಯ ಕೊಲೆಯಾಗಿರುತ್ತದೆ. ಈ ಕೊಲೆಯ ಆರೋಪವನ್ನು ನಿರೂಪಕರ ಮೇಲೆ ಹೊರಿಸಲಾಗುತ್ತದೆ. ನಂತರ ಪೊಲೀಸ್ ಠಾಣೆಯಲ್ಲಿ ಒಂದು ದಿನ ಕಳೆಯಬೇಕಾಗುತ್ತದೆ. ಕೊಲೆ ಆರೋಪದಿಂದ ಹೇಗೋ ಪಾರಾಗುತ್ತಾರೆ. ಕಥೆಯಲ್ಲಿ ಕೊಲೆಗಾರ ನಾರಾಣಿಯ ಮನಸ್ಥಿತಿಯನ್ನು ಅಚ್ಚುಕಟ್ಟಾಗಿ ನಿರೂಪಿಸಿದ್ದಾರೆ. ಅವನನ್ನು ಕೊಲೆಗಾರನೆಂದು ದೂರವಿಡದೆ ಮಾನವೀಯತೆಯಿಂದ ನೋಡುತ್ತಾರೆ ನಿರೂಪಕರು. ವಸ್ತು ಮತ್ತು ತಂತ್ರಗಳಿಂದ ಈ ಕಥೆ ಅವರ ಉಳಿದ ಕಥೆಗಳಿಗಿಂತ ಭಿನ್ನವಾದ ಕಥೆಯಾಗಿದೆ.

೫. ಕುಬುಸ

ಕುಂವೀ ಅವರ ಮತ್ತೊಂದು ವಿಶಿಷ್ಟ ಭಿನ್ನ ಬಗೆಯ ಕಥಾ ವಸ್ತುವನ್ನುಳ್ಳ ಕಥೆ ಇದಾಗಿದೆ. ಬುಡಕಟ್ಟು ಮೂಲದ ಸಮುದಾಯವೊಂದು ನಾಗರಿಕತೆಗೆ ತೆರೆದು ಕೊಳ್ಳುವ ಬಗೆಯನ್ನ ಈ ಕಥೆಯಲ್ಲಿ ನಿರೂಪಿಸಲಾಗಿದೆ. ಆದರೆ ಲೇಖಕರು ವಸ್ತುಸ್ಥಿತಿಯನ್ನು ಎಂದಿನ ತಮ್ಮ ಅತಿರಂಜಿತ ಶೈಲಿಯಲ್ಲಿಯೇ ಹೇಳುತ್ತಿದ್ದಾರೆಂದು ಅನ್ನಿಸದೇ ಇರದು. ಆದರೆ ಇತರೆ ಕಥೆಗಳಿಗಿಂತ ಕುಂವೀ ಅವರು ಈ ಕಥೆಯಲ್ಲಿ ತೋರಿರುವ ಸಂಯಮ, ನಿರೂಪಣೆಯಲ್ಲಿನ ಅಚ್ಚುಕಟ್ಟುತನ ಪ್ರಶಂಸಾರ್ಹವಾದುದಾಗಿದೆ.

> ಪೂರ್ವದ ಸಿಂಧವಾಡಿ ಪ್ರಾಂತ್ಯದಿಂದ ಪಶ್ಚಿಮದ ಕುಂತಳ ನಾಡನ್ನು ಬೇರ್ಪಡಿಸುವ ನದಿಯೊಂದರ ಅವಶೇಷವನ್ನು ಈಗಲೂ ನಮ್ಮ ಜಿಲ್ಲೆಯ ನೈರುತ್ಯ ದಿಕ್ಕಿನಲ್ಲಿ ಕಾಣಬಹುದು. ಯಾವ ಕಲ್ಲು ಎತ್ತಿದರೂ ಒಂದಾದರು ಚೇಳು ಗೋಚರಿಸುವ ಚೇಳುಗುಡ್ಡವೂ, ಯಾವುದಾದರೂ ಪೊದೆ ಕಲಕಿದರೆ ಒಂದಾದರು ಬಳೆವಡಕನಂಥ ಹಾವು ಗೋಚರಿಸುವ ಹಾವು ಗುಡ್ಡವೂ ನತದೃಷ್ಟ ನದಿಯ ಎಡಬಲ ಮಗ್ಗುಲಲ್ಲಿವೆ. ಈ ಎರಡು ಗುಡ್ಡಗಳ ತಪ್ಪಲಲ್ಲಿರುವ ಏಕೈಕ ಗ್ರಾಮವಾದ

> ಪಡ್ಡಟ್ಟಿಯು ಸ್ವಾತಂತ್ರ್ಯೋತ್ತರ ಭಾರತದಲ್ಲೂ ಶಿಲಾಯುಗ ಕಾಲದ ಎಲ್ಲ ಲಕ್ಷಣ ಸ್ವಭಾವಗಳನ್ನು ಉಳಿಸಿಕೊಂಡು ಬಂದಿದೆ. ಚೇಳುಗಳು, ಹಾವುಗಳು ನಾಗರಿಕತೆಯ ನೆರಳು ಆ ಗ್ರಾಮದ ಮೇಲೆ ಬೀಳದ ಹಾಗೆ ನೋಡಿಕೊಳ್ಳುತ್ತಿರುವವು. ಕೇಂದ್ರ ಸರಕಾರದವರು ಹಾವಿನ ಗುಡ್ಡ ಅಷ್ಟು ದೂರ ಇದೆ ಅನ್ನುತ್ತಿರಲಿಕ್ಕೆ ವಾಪಾಸಾದರೆ, ರಾಜ್ಯ ಸರಕಾರದವರು ಚೇಳುಗುಡ್ಡ ಅಷ್ಟು ದೂರ ಇದೆ ಅನ್ನುತ್ತಿರಲಿಕ್ಕೆ ವಾಪಾಸಾಗುತ್ತಿರುವುದರಿಂದ ಪಡ್ಡಟ್ಟಿ ಎಂಬ ಗ್ರಾಮವು ರಾಜಕೀಯ ನಕ್ಷೆಯಲ್ಲಿ ಜಾಗ ಪಡೆದಿಲ್ಲ. ಒಂದೇ ವಾಕ್ಯದ ಷರಾದಿಂದ ನೆಲದ ಪಾಲಾಗಿ ಬಿಡುವ ಕಾರಣದಿಂದಾಗಿಯೇ, ಅದನ್ನು ತಡವಿ ಯಾಕೆ ಕಂದಾಯ ಇಲಾಖೆಯವರು ಲಕ್ಷಣ ಕಳೆದುಕೊಳ್ಳಬೇಕೆಂಬ ಕಾರಣದಿಂದಾಗಿಯೋ ಏನೋ ಯಾರೊಬ್ಬರು ಆ ಗ್ರಾಮವನ್ನು ನಿಸೂರು ಮಾಡುವ ಗೋಜಿಗೆ ಹೋಗಿಲ್ಲ. ಆರಕ್ಕೇರದೆ ಮೂರಕ್ಕಿಳಿಯದೆ ಏನೋ ಒಂದು ರೀತಿ ಬದುಕುವ ಆ ಗ್ರಾಮದ ನಾನ್ನೂರು ಚಿಲ್ಲರೆ ಮಂದಿಯೂ ತಮಗದು ಬೇಕು, ತಮಗಿದು ಬೇಕು ಎಂದು ಅಹವಾಲು ಸಲ್ಲಿಸುವ ಗೋಜಿಗೆ ಹೋಗಿಲ್ಲ. ಯಾವುದೇ ರೋಗ ರುಜಿನಗಳ ತಂಟೆ ತಕರಾರುಗಳಿಲ್ಲದೆ ಶತಶತಮಾನಗಳ ಲಾಗಾಯ್ತು ಬದುಕುತ್ತ ಬಂದಿರುವ ಅವರು ದೇವರು ಕೊಟ್ಟಿರೋದು ಮನಾರ ಇರುವಾಗ ಟವುಜರು ಮಂದಿ ಏನು ಕೊಟ್ಟೇತು ಏನು ಬಿಟ್ಟೇತು ಎಂದು ತಿಳಿದುಕೊಂಡಿರುವಂಥ ಸಾದಾ ಸೀದಾ ಮಂದಿ, ಅವರು ಪಡ್ಡಟ್ಟಿ ವಿನಾ ದುಸರಾ ಪ್ರಪಂಚ ನೋಡಿದವರಲ್ಲ. ಅವರು ಹೊರ ಪ್ರಪಂಚದ ಉಸಬಾರಿಗೆ ಹೋದವರೂ ಅಲ್ಲ. ಬೆಳಗಾಗುತ್ತಲೇ ಎದ್ದು ಮುದ್ದೆ ಇಂಡಿ ಕಟ್ಟಿಕೊಂಡು ಕೊಟ್ಟೂರು ಸೀಮೇಲಿರೋ ಹುಲಿಗುಡ್ಡ ತಪ್ಪಲಿಗೆ ಹೋಗಿ ರೆಟ್ಟೆ ಮುರಿದು ಬಂಡೆಗಲ್ಲುಗಳನ್ನು ಎಬ್ಬಿಸಿ, ಅವುಗಳಿಗೊಂದು ಆಕಾರ ಕೊಟ್ಟು ಸಂಜೆಯಾಗುತ್ತಲೇ ಗ್ರಾಮಕ್ಕೆ ವಾಪಾಸಾಗಿ ಝಾಡಿಸಿ ಉಂಡು ಗಪ್ಪಂತೆ ಮಲಗಿ ಬಿಡುವ ಅವರು ಅಕ್ಷರ ಕಂಡರೆ ಗಡಗಡ ನಡುಗಿ ಮೂರು ಮಾರು ದೂರ ನಿಲ್ಲುವ ಸಾಧು ಸ್ವಭಾವದ ಮಂದಿ. ಅವರ ಬಂಧು ಬಳಗ ನೆಂಟರಿಷ್ಟರೆಲ್ಲರು ಆ ಗ್ರಾಮದೊಳಗೇ ಇರುವುದರಿಂದ ಅವರಿಗೆ ಯಾವುದೇ ಜಾಬು ಹೊರ ಪ್ರಪಂಚದಿಂದ ಬರುವುದಾಗಲೀ ತಾವು ಯಾವುದೇ ಜಾಬನ್ನು ಹೊರ ಪ್ರಪಂಚಕ್ಕೆ ಬರೆಸುವುದಾಗಲೀ ಇಲ್ಲವೇ ಇಲ್ಲ. ಇಂಥ ಅನೇಕ ಕಾರಣಗಳಿಂದ ಆ ಗ್ರಾಮವಾಗಲೀ, ಆ ಗ್ರಾಮದ ಮಂದಿಯಾಗಲೀ ಭೂತಕಾಲದ ಉಕ್ಕಿನ ತೆರೆ ಸೀಳಿಕೊಂಡು ವರ್ತಮಾನದ ಜಗಜಗಿಸುವ ರಂಗಭೂಮಿಯತ್ತ ಇಣುಕಿದವರಲ್ಲ.

ಇಂತಹ ಸ್ಥಿತಿಯಲ್ಲಿರುವ ಸಮುದಾಯವೊಂದರ ಮಗುವೊಂದು ಅಕ್ಷರ ಕಲಿತದ್ದು, ಅವನು ಬೆಂಗಳೂರಿನಂಥ ನಗರದಲ್ಲಿ ಸರ್ಕಾರಿ ಕೆಲಸ ಪಡೆದದ್ದು ಅಲ್ಲಿ ಅವನು ಕೆಲಸ ನಿರ್ವಹಿಸುತ್ತಿದ್ದ ಬಗೆ ಮುಂತಾದ ವಿವರಗಳು ಕಥೆಯಲ್ಲಿ ತಿಳಿ ಹಾಸ್ಯದಿಂದ ನಿರೂಪಿತವಾಗಿವೆ. ನೆಟ್ಕಲ್ಲು ಎನ್ನುವ ತನ್ನ ಹೆಸರನ್ನು ಎನ್. ಕೆ. ವಡ್‌ವಟ್ ಬದಲಾಯಿಸಿಕೊಂಡ. ಹಾಗೆಯೇ ತಾನು ಪೂಜಿಸುತ್ತಿದ್ದ ಸುಂಕಲಮ್ಮ, ಕಂದಾರೆಮ್ಮನಂಥ ಶೂದ್ರದೇವತೆಗಳಿಗೆ ನಡೆದುಕೊಳ್ಳುವುದನ್ನು ಬಿಟ್ಟು, ಮೇಲ್ವರ್ಗದವರು ನಡೆದುಕೊಳ್ಳುವ ದೇವತೆಗಳಿಗೆ ನಡೆದುಕೊಳ್ಳತೊಡಗಿದನು. ತನ್ನ ಭಾಷೆ ಮತ್ತು ನಂಬಿಕೆಗಳನ್ನು ಬದಲಾಯಿಸಿಕೊಳ್ಳಲು ಪ್ರಯತ್ನಿಸಿದನು. ಅವನು ಬೆಂಗಳೂರಿನಲ್ಲಿ ಕನ್ಯೆಯೊಂದನ್ನು ನೋಡಿ ಮದುವೆಯಾಗಲು ಅನುಮತಿಗಾಗಿ ಊರಿಗೆ ಬಂದು ಮುದುಕಿಯನ್ನು ಕೇಳಿದಾಗ ಆ ಮುದುಕಿಯು ಅವನು ಮದುವೆಯಾಗಲಿರುವವಳ ಫೋಟೋ ನೋಡಿ 'ಕುಬುಸ ತೊಡೋಳ್ಳ ಅದೆಂಗೋ ಮದ್ವಿ

ಅಗ್ತೀಯಾ... ಈ ಊರಂಭೋ ಊರಾಗ ಯಾವ ಯಣ ಮಗಳಾದ್ರು ಕುಬುಸ ತೊಟ್ಟಾಳೇನೋ ನೋಡು' ಎಂದು ಕಿಡಿ ಕಿಡಿ ಕಾರಿತು. ಸಾಂಪ್ರಾದಾಯಿಕವಾಗಿ ಆ ಸಮುದಾಯದವರು ಉಡುಚಲಮ್ಮ ಎನ್ನುವ ಗ್ರಾಮದೇವತೆಯ ಆರಾಧಕರಾಗಿದ್ದುದರಿಂದಲೂ ಮತ್ತು ಉಡುಚಲಮ್ಮನಿಗೆ ಕುಪ್ಪಸವಿರಲಿಲ್ಲವಾದ್ದರಿಂದ ಯಾರೂ ಕುಪ್ಪಸ ತೊಡುತ್ತಿರಲಿಲ್ಲ. ಅವನಿಗೆ ಊರಲ್ಲಿ ಆ ಅಜ್ಜಿಯನ್ನು ಒಪ್ಪಿಸಲಾಗದೇ ಬೆಂಗಳೂರಿಗೆ ವಾಪಾಸಾಗಿ ಮದುವೆಯಾಗುತ್ತಾನೆ. ಮಕ್ಕಳೂ ಹುಟ್ಟುತ್ತಾರೆ. ಆನಂತರ ಸ್ವಲ್ಪ ಕಾಲದ ನಂತರ ಅಜ್ಜಿಯನ್ನು ಬೆಂಗಳೂರಿನ ತನ್ನ ಮನೆಗೆ ಕರೆ ತರುವುದು, ಆ ಮುದುಕಿಯ ಬಸ್ಸಿನ ಪಯಣದ ಪರಿಯನ್ನು ವರ್ಣಿಸುವುದು, ಬೆಂಗಳೂರಿನಲ್ಲಿ ಆಧುನಿಕ ನಾಗರಿಕ ಜಗತ್ತಿನ ಕುತೂಹಲದ ವಸ್ತುವಾಗಿ ಆ ಮುದುಕಿಯು ಮಾರ್ಪಡುವುದು, ಅವಳಿಗೆ ಕುಪ್ಪಸ ತೊಡಲು ಪ್ರೇರೇಪಿಸುವುದು ಇವೆಲ್ಲಾ ಕಥೆಯಲ್ಲಿ ಆದ್ಯಂತವಾಗಿ ಹಾಸ್ಯ ಉಕ್ಕಿಸುವಂತಿವೆ. ಕುಂವೀಯವರು ಬುಡಕಟ್ಟು ಮೂಲದ ಸಮುದಾಯವೊಂದು ಆಧುನಿಕತೆಗೆ ತೆರೆದುಕೊಳ್ಳುವಾಗ ಒಳಗಾಗುವ ಸಂಘರ್ಷವನ್ನು ಈ ಕಥೆಯಲ್ಲಿ ಚಿತ್ರಿಸಿದ್ದಾರೆ.

**೬. ಎಲುಗನೆಂಬ ಕೊರಚನೂ ಚವುಡನೆಂಬ ಹಂದಿಯೂ**

ಕುಂವೀಯವರ ಈ ಕಥೆಯು ಗ್ರಾಮೀಣ ಪ್ರದೇಶದಲ್ಲಿ ಇರುವ ನಂಬಿಕೆಯೊಂದನ್ನು ಆಧರಿಸಿ ರೂಪುಗೊಂಡ ಕಥೆಯಾಗಿದೆ. ಹಂದಿಯನ್ನು ಮಹಾವಿಷ್ಣುವಿನ ಅವತಾರವೆಂದು ನಂಬಲಾಗುತ್ತದೆ. ಮನೆಗೆ ನುಗ್ಗಿದ ಹಂದಿಯನ್ನು ಅದನ್ನು ಹೊರಗೆ ಬಿಡಬಾರದೆಂತಲೂ ಅದನ್ನು ಹೊಸ್ತಿಲ ಒಳಗೆಯೇ ಹೂತು ಹಾಕಬೇಕೆಂಬ ನಂಬಿಕೆ ಈ ಪ್ರದೇಶದ ಮೇಲ್ವರ್ಗದವರಲ್ಲಿದೆ. ಅದನ್ನು ಮಹಾಲಕ್ಷ್ಮಿಯ ಪ್ರತಿರೂಪವೆಂದು ಭಾವಿಸಲಾಗುತ್ತದೆ. ಎಲುಗನೆಂಬ ಕೊರಚನ ಚವಡನೆಂಬ ಹಂದಿಯೊಂದು ರಾತ್ರಿಯ ಹೊತ್ತು ಗೌಡನ ಮನೆಗೆ ನುಗ್ಗಿದ್ದರಿಂದ ಅದನ್ನು ಹೊಡೆದು ಸಾಯಿಸಿ ಮನೆಯೊಳಗೆ ಹೂಳಲಾಗುತ್ತದೆ. ಇದಕ್ಕೆ ಪ್ರತೀಕರಾವಾಗಿ ಚವುಡ ರಾತ್ರಿಯ ಹೊತ್ತು ಗೌಡನ ಮಗ ವಿರೂಪಾಕ್ಷಿಯನ್ನು ಕೊಂದು ತನ್ನ ಹಟ್ಟಿಯೊಳಗಡೆ ಹೂಳುತ್ತಾನೆ ಎನ್ನುವಲ್ಲಿಗೆ ಕಥೆ ಮುಗಿಯುತ್ತದೆ. ಯಥಾಪ್ರಕಾರ ಕುಂವೀಯವರ ಕಥನದ ನೆಲೆ ಬಂಡಾಯವೇ ಆಗಿದೆ. ಶೋಷಿತರು ಮತ್ತು ಶೋಷಕರು ಅವರ ವಿರುದ್ಧ ಸುಪ್ತವಾಗಿ ಅಡಗಿದ್ದ ಆಕ್ರೋಶ, ಅದು ವ್ಯಕ್ತಗೊಳ್ಳುವ ಬಗೆ ಈ ರೀತಿಯಲ್ಲಿ ಸಿದ್ಧ ಸಮೀಕರಣವೊಂದಕ್ಕೆ ಹೊಂದಿಸಿ ಹೆಣೆಯಲ್ಪಟ್ಟ ಕಥೆ ಇದಾಗಿದೆ. ಇಲ್ಲಿ ಹಂದಿಯೊಂದಿಗೆ ಮನುಷ್ಯರನ್ನು ವರ್ಣಿಸಲ್ಪಡುವ ಬಗೆ ಹಸಿಹಸಿಯಾಗಿಯೇ ಇದೆ. ಪ್ರಾದೇಶಿಕ ನುಡಿಗಟ್ಟುಗಳೊಂದಿಗೆ ಕುಂವೀ ಅವರು ನಡೆಸುವ ಭಾಷಿಕ ಕಸರತ್ತು ಮತ್ತು ತಾವು ನಂಬಿದ ಸಿದ್ಧಾಂತಗಳೊಂದಿಗಿನ ಬದ್ಧತೆಯಿಂದಾಗಿ ಅವರ ಬಹುತೇಕ ಕಥೆಗಳು ಕಲೆಯಾಗುವಲ್ಲಿ ಸೊರಗುತ್ತವೆ ಎನ್ನುವುದಕ್ಕೆ ಎಲುಗನೆಂಬ ಕೊರಚನೂ ಚವುಡನೆಂಬ ಹಂದಿಯೂ ಕಥೆ ಉತ್ತಮ ನಿದರ್ಶನವಾಗಿದೆ.

**೭. ಕೆಂಡದ ಮಳೆ ಕರೆವಲ್ಲಿ ಉದಕವಾಗಿದ್ದವರ ಕಥೆ**

ಕುಂವೀಯವರ ಈ ಮೇಲಿನ ಕಥೆಯೂ ಶೋಷಣೆಯ ವಿರುದ್ಧ ಬಂಡೇಳುವ ಕಥೆಯಾಗಿದೆ. ಆದರೆ ವ್ಯವಸ್ಥೆಯ ವಿರುದ್ಧದ ಆಕ್ರೋಶ ಮತ್ತು ಅಸಹಾಯಕತೆಯಿಂದ ತತ್ತರಿಸಿ ಹೋದ ಜೀವಗಳ ಕಥೆಯಾಗಿದೆ. ಕಥೆಯ ಶೀರ್ಷಿಕೆಯೇ ಹೇಳುವಂತೆ ಉದಕವಾಗಿ ಮಾರ್ಪಟ್ಟಿದ್ದಾರೆ. ಇದೊಂದು ನೀಳ್ಗತೆಯಾಗಿದೆ. ಹಳ್ಳಿಯ ಬಡ ಮುಸ್ಲಿಂ ಕುಟುಂಬವೊಂದರ ಯಜಮಾನ ಸತ್ತಾಗ ಅವನನ್ನು ಹೂಳಲು ಪ್ರತ್ಯೇಕ ಸ್ಥಳವಿರದ ಕಾರಣ ವೀರಶೈವರ ರುದ್ರಭೂಮಿಯಲ್ಲಿ ಮಣ್ಣು ಮಾಡಲಾಗಿರುತ್ತದೆ. ಹಾಗೆ ಮಣ್ಣು ಮಾಡುವಾಗ ಹಿರಿಯ ಒಪ್ಪಿಗೆ ತೆಗೆದುಕೊಂಡೇ ಮಣ್ಣು ಮಾಡಲಾಗಿತ್ತೆಂದು ಕಥೆಯಲ್ಲಿ ತಿಳಿಸಲಾಗಿದೆ. ಸತ್ತ ಶೇಕಣ್ಣನ ಮಗ ಪೀರಣ್ಣ ನಗರದಲ್ಲಿರುತ್ತಾನೆ. ಗೌಡ ಆತನಿಗೆ ಪತ್ರ ಬರೆದು ಊರಿಗೆ ಕರೆಸಿ ಪಂಚಾಯ್ತಿ ನಡೆಸುತ್ತಾನೆ. ಪಂಚಾಯ್ತಿಯು ಐದು ನೂರು ರೂಪಾಯಿ ದಂಡ ಮತ್ತು ಊರಿಗೆಲ್ಲ ಸಿಹಿ ಊಟ ಹಾಕಿಸಬೇಕೆಂದು ತೀರ್ಮಾನಿಸಲಾಗುತ್ತದೆ. ಆದಾಗ್ಯೂ ಮರುದಿನ ಪೀರಣ್ಣನ ತಂದೆಯ ಹೆಣವನ್ನು ರುದ್ರಭೂಮಿಯಿಂದ ಹೊರತೆಗೆದು ಊರ ಅಗಸೆ ಬಾಗಿಲ

ಹತ್ತಿರ ಹಾಕಿರುತ್ತಾರೆ. ಗೌಡರು ಈ ವಿಷಯ ಮಾತಾಡಲೆಂದೇ ಪೀರಣ್ಣನಿಗೆ ಪತ್ರ ಬರೆದು ಕರೆಯಿಸಿಕೊಂಡರೆಂದು ಕಥೆಯಲ್ಲಿ ಹೇಳಲಾಗಿದೆ. ಆ ಅವಧಿಯನ್ನು ಗಮನಿಸಿದರೆ ಹೆಣ ಪೂರ್ತಿ ಕೊಳೆತು ಮಣ್ಣಾಗಿರಬೇಕು. ಆದರೆ ಕಥೆಗಾರರು "ಅಗಸೆ ಬಾಕಲಿಗೆ ಸ್ವಲ್ಪ ದೂರದಲ್ಲಿ ಖರೇವಂದರೂ ಹೆಣ ಅಂಗಾತ ಬಿದ್ದಿತ್ತು. ಅಖಾಡಕ್ಕಿಳಿದ ಪಯಿಲವಾನನ ಭಂಗಿಯಲ್ಲಿ ಅದಿತ್ತು. ಅದು ಇಡೀ ಊರಂಬೋ ಊರಿಗೆ ಸವಾಲು ಹಾಕುವ ರೀತಿಯಲ್ಲಿತ್ತು. ಕಣ್ಣು ಬಾಯಿಗಳಿದ್ದ ಭಾಗದಲ್ಲಿ ತೂತುಗಳಿದ್ದವು. ತಲೆಯ ಮೇಲೆ ದವಡೆಯ ಭಾಗಗಳು ಪೂರ್ತಿ ಕೊಳೆತು ಹೋಗಿದ್ದ ಪರಿಣಾಮವಾಗಿ ಅಳ್ಳೆದೆಯವರು ನೋಡುವಂತಿರಲಿಲ್ಲ. ಸೂರ್ಯನ ಬೆಳಗಿನ ಕಿರಣಗಳು, ಹೆಣದ ಮ್ಯಾಲೆ ಕೋಲು ಕುಣಿಸತೊಡಗಿದ್ದವು. ತನ್ನ ಬಳಿಗೆ ಯಾರೊಬ್ಬರೂ ತಟಾಯದ ರೀತಿಯಲ್ಲಿ ದುರ್ವಾಸನೆಯ ಒಂದು ಪರಿಧಿಯನ್ನು ಅದು ರಚಿಸಿಕೊಂಡು ನಿರುಮ್ಮಳವಾಗಿತ್ತು" ಎಂದು ಬರೆಯುತ್ತಾರೆ.

ನಂತರ ಪೀರಣ್ಣನ ತಮ್ಮ ಭಾಷಾ ಕುಡಿದು ಬಂದು ಆ ಹೆಣವನ್ನು ಗೌಡನ ಮನೆಯಲ್ಲಿ ಹಾಕಿಬರುತ್ತಾನೆ. ನಂತರ ಬಾಷಾನನ್ನು ಪೊಲೀಸ್ ಠಾಣೆಗೆ ಕರೆದೊಯ್ಯಲಾಗುತ್ತದೆ. ಅವನನ್ನು ಅಲ್ಲಿಂದ ಬಿಡಿಸಿಕೊಡು ಬರಲಿಕ್ಕೆ ಬೇಕಾದ ಲಂಚಕ್ಕಾಗಿ ಅವರು ಹೊಲ ಮಾರಲು ತಯಾರಾಗುತ್ತಾರೆ. ಆದರೆ ಆ ಹೊಲವನ್ನು ಯಾರೂ ಕೊಂಡು ಕೊಳ್ಳಬಾರದೆಂದು ಬಹಿಷ್ಕಾರ ವಿಧಿಸುತ್ತಾರೆ. ಸತ್ತ ಪೀರಣ್ಣನ ತಂದೆ ಶೇಕಣ್ಣ ದೆವ್ವವಾಗಿ ಮಗಳು ಬೇಗಮ್ಮನಿಗೆ ಆವಾಹಿಸಿರುತ್ತಾನೆ ಎಂಬಲ್ಲಿಗೆ ಕಥೆ ಮುಕ್ತಾಯವಾಗುತ್ತದೆ.

**೮. ಕಥೆ ಹೇಳೋ ಕರಿಯಜ್ಜ**

ಕಥೆಯ ವಸ್ತು ಕರಿಯನೆನ್ನುವವನು ಯುವಕನಾಗಿದ್ದಾಗಿನಿಂದಲೂ ಕಥೆ ಹೇಳುತ್ತಾ ಬೆಳೆಯುತ್ತಾನೆಂಬುದಾಗಿದೆ. ಅವನ ಕಥೆಗಳು ಹಳ್ಳಿಯವರನ್ನು ಮಾತ್ರವಲ್ಲದೆ ಸುತ್ತಮುತ್ತಲ ಹಳ್ಳಿಗಳಲ್ಲೂ ಪ್ರಚಾರ ಪಡೆದು ಹೊಸ ರೂಪ ಪಡೆದುಕೊಳ್ಳುತ್ತಿದ್ದವು. ಮೌಖಿಕ ಪರಂಪರೆಯ ಸ್ವರೂಪವೇ ಆಗಿರುತ್ತದೆ. ಹೀಗೆ ಕಥೆ ಹೇಳುತ್ತಿದ್ದ ಕರಿಯಜ್ಜ ತನ್ನ ಕಥೆಗಳ ಮೂಲಕ ಹಲವರ ಸಮಸ್ಯೆ ರೋಗಗಳನ್ನು ಗುಣಪಡಿಸುತ್ತದ್ದನೆಂದು ಊರ ಗೌಡನು ಗಂಡನನ್ನು ಬಿಟ್ಟು ಬಂದಿರುವ ತನ್ನ ಮಗಳ ಸಂಸಾರವನ್ನು ಸರಿಪಡಿಸಬೇಕೆಂದು ಹಾಗೆ ಸರಿಪಡಿಸಿದರೆ ಮನೆಮಗನನ್ನಾಗಿ ನೋಡಿಕೊಳ್ಳುತ್ತೇನೆಂದು ಹೇಳುತ್ತಾನೆ. ಕರಿಯಜ್ಜ ಅವಳ ಸಮಸ್ಯೆಯನ್ನು ಸರಿಪಡಿಸುತ್ತಾನೆ. ನಂತರ ಗೌಡ ಕಥೆ ಹೇಳಲು ಕರಿಯಜ್ಜನನ್ನು ಕರೆದೊಯ್ಯುವವರಿಗೆಲ್ಲ ಇಂತಿಷ್ಟು ಹಣ ಎಂದು ನಿಗಧಿಪಡಿಸುತ್ತಾನೆ. ಗೌಡ ಕರಿಯಜ್ಜನಿಂದ ದುಡ್ಡು ಮಾಡಿಕೊಳ್ಳುವ ತಂತ್ರ ಹೂಡುತ್ತಾನೆ. ನಂತರ ಕರಿಯ ಕರಿಯಜ್ಜನಾಗಿ ಬೆಳೆಯುತ್ತಿರುವ ಕಲ್ಲೆಂದು ನಂಬಲಾಗುತ್ತಿರುವ ದೈವಂಶದ ಕಲ್ಲೊಂದರ ಬಳಿ ಜೋಪಡಿ ಕಟ್ಟಿಕೊಂಡು ಇರುತ್ತಾನೆ. ಆವಾಗಿಂದ ಆ ಕಲ್ಲು ತನ್ನ ಬೆಳವಣಿಗೆಯನ್ನು ನಿಲ್ಲಿಸುತ್ತದೆ. ಬರುಬರುತ್ತಾ ಅವನೊಳಗಿನ ಕಥೆಗಳು ಹೊರಬರಲಾರದೆ "ಒಂದರ ಮೇಲೆ ಒಂದರಂತೆ ಬಿದ್ದು ಒದ್ದಾಡುತ್ತಿರವವೇ... ನವರಂಧ್ರಗಳೆಲ್ಲ ಕಿಲುಬಿ ಜಡ್ಡು ಹಿಡಿದು ಮುಚ್ಚಿದ್ದರಿಂದ ಅಂಯುವ ಕಥೆಗೂ ಒಂದು ಹೆಜ್ಜೆ ಕಿತ್ತು ಇಡಲಾಗಲಿಲ್ಲ. ಅಂತರಂಗವೆಂಬೋ ಅಂತರಂಗ ಜಲಿಯನ್ ವಾಲ್‌ಬಾಗ್‌ನಂತೆ... ಅದಕ್ಕಿದ್ದ ಒಂದೇ ದ್ವಾರದ ತುಂಬ ಜನರಲ್ ಡೈಯರ್ ಮಾರಕಾಸ್ತ್ರಗಳೊಂದಿಗೆ ನಿಂತಿರುವಂತೆ... ಯಾವ ಕ್ಷಣದಲ್ಲಿ ಏನಾಗಿಬಿಡುವುದೋ... ಆತಂಕದ ದಟ್ಟ ಛಾಯೆ... ವಿಚಿತ್ರ ಧಗೆ... ಸೆಕೆ... ಪ್ರಾಣವಾಯುವಿನ ಕೊರತೆ... ಸಾಮೂಹಿಕವಾಗಿ ಬೇಯುತ್ತಿರುವ ಕಥೆಗಳು, ಎಲ್ಲೆಲ್ಲೂ ರಾರಾಜಿಸುತ್ತಿರುವ ಪ್ರಶ್ನಾರ್ಥಕ ಚಿಹ್ನೆ..." ಹೀಗೆ ಕಥೆಗಳು ಹೊರಬರಲಾರದೆ ಒಳಗಡೆಯೇ ದಾಂಗುಡಿಯಿಡುತ್ತಿದ್ದವೆಂದು ನಿರೂಪಿಸಲಾಗಿದೆ. ನಂತರ ಕುಂವೀ ಅವರು ಸಾಂಕೇತಿಕವಾಗಿ ಕಥೆಯನ್ನು ಮುಕ್ತಾಯಗೊಳಿಸುತ್ತಾರೆ.

ಕಥೆಗಾರ ಎಂದೂ ಹಿಗೆ ವರ್ತಿಸಿದವನಲ್ಲ. ಶಾರೀರಕವಾಗಿ ತುಂಬ ಕೃಶಗೊಂಡಿರುವ ಅವನ ವಿರುದ್ಧ ಯಾವುದೇ ಪಂಚೇಂದ್ರಿಯಗಳೂ, ನವರಂಧ್ರಗಳೂ ಕ್ಯಾತೆತೆಗೆದಿರಬಹುದೆ ಎಂಬ ಸಂದೇಹ ವ್ಯಕ್ತಪಡಿಸಿದವು ಕೆಲವು. ಕಾಲಕ್ಕನುಗುಣವಾಗಿ ಅವೇನಾದರೂ ಸುಂಕ ಬಯಸಿ ಕರ್ತವ್ಯಕ್ಕೆ ಚೆನ್ನು ಮಾಡಿರಬಹುದೇ ಎಂದು

ತರ್ಕಿಸಿದವು. ಮಾರ್ಗಗಳನ್ನೂ ಒಂದು ಕೈ ವಿಚಾರಿಸಿಕೊಂಡು ಬಿಡುವುದೆಂದು ನಿರ್ಧರಿಸಿ ಅವೆಲ್ಲ ಗುಂಪುಗುಂಪಾಗಿ ಕೆಲವು ಪಂಚೇಂದ್ರಿಯಗಳ ಕಡೆಗೂ; ಕೆಲವು ನವರಂಧ್ರಗಳ ಕಡೆಗೂ ಹೋದವು. ಯಾವ ಸಂಘಟನೆ ವ್ಯಾಪ್ತಿಯಲ್ಲಿರದಿದ್ದ ಚಿಲ್ಲರೆ ಪಲ್ಲರೆ ಕಥೆಗಳು ಕರಿಯಜ್ಜನ ಸ್ವೇದರಂಧ್ರಗಳ ಮೂಲಕ ಕನ್ನಕೊರೆಯುವ ಪ್ರಯತ್ನಕ್ಕಿಳಿದವು. ಅಂತರಂಗದ ಸಮಸ್ತ ಕಥೆಗಳ ನಿರ್ವಿರಾಮದ ಒತ್ತಡದಿಂದಾಗಿ ಕರಿಯಜ್ಜ ಕ್ಷಣದಿಂದ ಕ್ಷಣಕ್ಕೆ ಪಳುಗಟ್ಟೆಗೆ ಜೇರಿಳಿಬಿಡುತ್ತಲೇ ಇದ್ದ. ಶೂನ್ಯದ ಕಡೆ ದೃಷ್ಟಿ ನೆಟ್ಟಿರುವಂತೆಯೇ ಇತ್ತು. ಅವನು ಬದುಕಿದ್ದನೋ! ಸತ್ತಿದ್ದನೋ!

ಕಥೆ ಹೇಳುವ ಕರಿಯಜ್ಜ ಮತ್ತು ಅವನು ತನ್ನ ಕಥೆಗಳಿಂದ ಹಲವರ ಸಮಸ್ಯೆಗಳನ್ನು ಬಗೆಹರಿಸುತ್ತಿದ್ದ ಮುಂತಾದ ಒಂದು ಸಣ್ಣ ಎಳೆಯೊಂದರ ಮೂಲಕ ಕಥೆ ಪ್ರಾರಂಭಿಸಿ ವಿವರಗಳನ್ನು ಎಳೆದಾಡುತ್ತಾ ಆಡುನುಡಿಯ ಭಾಷಿಕ ಕಸರತ್ತು ನಡೆಸುತ್ತಾ ಹರಟೆಯ ಮಟ್ಟದಲ್ಲೇ ಉಳಿದು ಬಿಡುವ ಅಪಾಯದಿಂದ ಈ ಕಥೆಯೂ ಪಾರಾಗಿಲ್ಲ. ಕುಂವೀ ಅವರ ಬಹುತೇಕ ಕಥೆಗಳೆಲ್ಲಾ ಈ ಜಿಕ್ಕಟ್ಟಿನಿಂದ ಪಾರಾಗಿಲ್ಲವೆನ್ನಬಹುದು. ಕಥೆ..ಕಥೆಯಲ್ಲಿನ ಘಟನೆ, ಮತ್ತೊಂದು ಘಟನೆ ಹೀಗೆ ಒಂದಕ್ಕೊಂದು ಬೆಳೆಯುವ ಪೂರಕ ಕ್ರಿಯೆಯಾಗದೆ ಕಥನ ಕ್ರಿಯೆಯು ಯಾವ ಹೊಸ ಆಯಾಮವನ್ನೂ ಗಳಿಸಿಕೊಳ್ಳಲಾಗದೆ ಹರಟೆಯ ಮಟ್ಟದಲ್ಲೆ ಅಥವಾ ಪ್ರಬಂಧವೊಂದರ ಹಂತದಲ್ಲೇ ನಿಂತು ಬಿಡುವ ಅಪಾಯದಿಂದ ಇಲ್ಲಿನ ಕಥೆಗಳು ಪಾರಾಗಿಲ್ಲವೆಂದು ಹೇಳಬಹುದು.

೯. ಇನ್ನಾದರೂ ಸಾಯಬೇಕು

ಕುಂವೀಯವರ ಇನ್ನಾದರೂ ಸಾಯಬೇಕು ಕಥೆಯು ನವ್ಯದ ಪ್ರಭಾವದಿಂದ ರೂಪುಗೊಂಡ ಕಥೆಯಾಗಿದೆ. ಕಥೆಯ ಆರಂಭದಲ್ಲಿಯೇ ಈ ಬಗೆಗೆ ಸ್ಪಷ್ಟತೆ ದೊರೆಯುತ್ತದೆ.

> **ಈಗ ನಾನು ಬಳ್ಳಾರಿಯಲ್ಲಿ ಲಿದಿರೋದು ಜೇಬಿನಲ್ಲಿರೋ ಐದುನೂರು ರೂಪಾಯಿ ಜಂ ಅಂತ ಖರ್ಚ್ ಮಾಡಿ ಇಪ್ಪತ್ನಾಲ್ಕನೇ ಗಂಟೆಯ ಕೆಲವು ನಿಮಿಷಗಳಲ್ಲಿ ಗೊಟಕ್ ಎಂದು ಸತ್ತು ಹೋಗಲಿಕ್ಕಾಗಿ. ಬದುಕಿದ್ದರೆ ಆ ಹುಡುಗಿ ಮಾಡ್ಕೊಳ್ಳೋ... ಈ ಹುಡುಗಿ ಮಾಡ್ಕೊಳ್ಳೋ... ವರದಕ್ಷಿಣೆ ಅಷ್ಟು ಸಾವ್ರ, ಇಷ್ಟು ಸಾವ್ರ ಎಂದು ಮಾರಾಟಕ್ಕೆ ಹಚ್ಕೊ ಅಪ್ಪ ಪ್ರಾಣ ಬಿಟ್ರೂ ಜಾತಿ ಬಿಡಬಾರ್ದೋ ಎಂದು ಕರಾರುವಕ್ಕಾಗಿ ಧರ್ಮೋಪದೇಶ ಮಾಡುವ ಅಜ್ಜಿ, ಇಂಥೋರೆಲ್ಲ ದಿನಕ್ಕಿಷ್ಟು ಸಾಯಿಸುತ್ತಾರೆ. ಎಲ್ಲರ ಥರ ಬದುಕಿದ್ದರೆ ಅದೊಂದು ಬಯಕೇ ಎಂಬ ಸಿದ್ಧಾಂತ ನಂದು. ಕೆಲವರ ಮೂಗಿನ ನೇರಕ್ಕೇ ಬದುಕನ್ನು ತಿದ್ದಿ ಕೊಳ್ಳುವುದೆಂದರೆ ನನ್ನ ಅಸ್ತಿತ್ವದ ಜುಟ್ಟವನ್ನು ಇನ್ನೊಬ್ಬರ ಮುಷ್ಟಿಗೆ ಒಪ್ಪಿಸುವುದು ಎಂದರ್ಥ, ನನ್ನ ಬದುಕಿನ ವೈಯಕ್ತಿಕ ನಿಲುವುಗಳೇನು ಎಂಬುದು ಇನ್ನು ಸ್ಪಷ್ಟವಾಗಿ ನಿರ್ಧರಿತವಾಗಿಲ್ಲದಿರುವುದೇ ಸಾವಿನ ಸೌಂದರ್ಯ ದ್ವಿಗುಣವಾಗಲಿಕ್ಕೆ ಸಾಧ್ಯವಾಗಿದೆ. ಮಾನವನ ಪರಿಸರದಲ್ಲಿ ಅರ್ಥ ಶೋಧಿಸುವುದೇ ಒಂದು ಮೂರ್ಖತನ ಎಂಬ ಅರಿವು ನನಗೆ ಇತ್ತೀಚಿನ ದಿನಗಳಲ್ಲಿ ಆಗಿರುವುದರಿಂದ ಒಂದೆರಡು ಮೊಳದಷ್ಟು ನೆಲಕ್ಕಿಳಿದಿರುವ ನನ್ನ ಬೇರುಗಳನ್ನು ಕಿತ್ತುಕೊಂಡು ಇಲ್ಲವಾಗುವುದು, ಅಥವಾ ಕೆಲವರ ಎದೆಯಲ್ಲಿ ಪೇಲವ ನೆನಪಿನ**

ಅವಶೇಷವಾಗುವುದ, ಅಥವಾ ನನ್ನ ಮನಸ್ಸನ್ನು ಮೃಗಾಲಯವಾಗಿ ಪರಿವರ್ತಿಸಿದ ನನ್ನನ್ನು ಹುಟ್ಟಿಸಿ ಪಳಗಿಸುವಲ್ಲಿ ಅಸಮರ್ಥರಾದ ನನ್ನ ಜನರಿಗೆ ನನ್ನ ಸ್ವಯಂಕಲ್ಪಿತ ಅಕಾಲಿಕ ಸಾವಿನಿಂದ ದಿಗ್ಭ್ರಮೆಗೊಳಿಸುವುದು, ಅಥವಾ ನನ್ನ ಹಾಗೆ ಕೇವಲ ಹಾಸಿಗೆಗಳಾಗಿ ಬದುಕತ್ತ ಎಲ್ಲ ಕಲೆ ಗುತರ್ುಗಳಿಗೆ ಅಧೀನರಾಗಿ ನಿರ್ಲಿಂಗವಾಗುತ್ತಿರುವ ಗೆಳೆಯರಿಗೆ ನನ್ನ ಸಾವು ಶಾಕ್ ಟ್ರೀಟ್‌ಮೆಂಟ್ ಕೊಡಬಹುದೆಂಬ ದೃಷ್ಟಿಯಿಂದ, ಅಥವಾ ನನ್ನನ್ನು ಪ್ರೀತಿಸಿದಂತೆ ನಟಿಸಿ ತಮ್ಮ ತುಟಿಗೆಲ್ಲ ಕಣ್ಣು ಟೊಂಕಗಳೆಂಬ ಆಳೆತ್ತರದ ಬೇಲಿಯನ್ನು ನನ್ನ ಮೆದುಳಿನಂಗಳದಲ್ಲಿ ಬೆಳಸಿ ದೂರ ಸರಿದು ಹೋಗಿರುವ ಗಿರಿಜಾ, ರಮಾ, ಶುಷ್ಮಾ, ಕಮಲೀ, ಶಾಲಿನೀಯರಂಥ ಸುಂದರ ಉಷ್ಣಪಕ್ಷಿಗಳನ್ನು ಪಶ್ಚಾತ್ತಾಪ ಪಡಿಸುವ ದೃಷ್ಟಿಯಿಂದ ನಾನು ಸಾವನ್ನು ಒಳಗೊಳ್ಳುತ್ತಿರುವೆ."

ಎಂದು ನಿರೂಪಕರು ಸಾಯುತ್ತಿರುವುದಕ್ಕೆ ಕಾರಣಗಳನ್ನು ನೀಡುತ್ತಾರೆ. ಬದುಕಿನ ಅಸಂಗತತೆಯ ಕುರಿತು ವಿಶ್ಲೇಷಿಸುತ್ತಲೇ ಸಾಯಬೇಕೆಂದರೂ ಹಾಗದೆ ಮದ್ಯ ಸೇವಿಸಿ ವೇಶ್ಯೆಯೊದಿಗೆ ಮಲಗಿ ಆನಂತರ ಸಾಯಲು ಕಾರಣಗಳನ್ನು ಚೀಟಿಯಲ್ಲಿ ಬರೆದಿಟ್ಟು ಮರುದಿನ ಆ ಚೀಟಿಯನ್ನೇ ಆಶ್ಚರ್ಯದಿಂದ ನೋಡಿ ಇಷ್ಟೊತ್ತಿಗೆ ಊರಿಗೆ ಹೋಗಿದ್ದರೆ ಚೆನ್ನಾಗಿತ್ತೆಂದು ಸೂಟ್‌ಕೇಸ್ ಹಿಡಿದು ಹೊರಡುತ್ತಾರೆ ನಿರೂಪಕರು.

**(ಈ ಅಧ್ಯಾದಲ್ಲಿ ಬಳಸಿಕೊಂಡಿರುವ ಕಥೆಗಳು ವೀರಭದ್ರ ಅವರ ಅನಾಥ ಪಕ್ಷಿಯ ಕಲರವ ಮತ್ತು ಕುಂವೀ ಅವರ ಬರಿ ಕಥೆಯಲ್ಲೋ ಅಣ್ಣಾ ಎನ್ನುವ ಸಮಗ್ರ ಕಥಾ ಸಂಕಲನಗಳಿಂದ ಆಯ್ದುಕೊಂಡವಾಗಿವೆ)**

ಪ್ರಸ್ತುತ ಅಧ್ಯಯನದಲ್ಲಿ ವೀರಭದ್ರ ಮತ್ತು ಕುಂ. ವೀರಭದ್ರಪ್ಪ ಅವರ ಸಣ್ಣಕಥೆಗಳ ಮುಖೇನ ಪ್ರಾದೇಶಿಕ ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯ ಕಥನದ ಸ್ವರೂಪವನ್ನು ಅರಿಯಲು ಪ್ರಯತ್ನಿಸಲಾಗಿದೆ. ಕುಂವೀ ಅವರ ಕಥೆಗಳಲ್ಲಿ ಅಭಿವ್ಯಕ್ತಿಗೊಂಡ ಪ್ರಾದೇಶಿಕತೆಯ ಅಂಶಗಳಿಗೂ ಮತ್ತು ವೀರಭದ್ರ ಅವರ ಕಥೆಗಳ ಪ್ರಾದೇಶಿಕ ಅಂಶಗಳಿಗೂ, ಸ್ವರೂಪಕ್ಕೂ ವ್ಯತ್ಯಾಸವಿದೆ. ಪ್ರಸ್ತುತ ಅಧ್ಯಯನದ ಹಿನ್ನೆಲೆಯಲ್ಲಿ ಕಂಡುಕೊಂಡ ಫಲಿತಗಳನ್ನು ಈ ಕೆಳಗಿನಂತೆ ಪಟ್ಟಿಮಾಡಲಾಗಿದೆ.

ಕುಂ.ವೀರಭದ್ರಪ್ಪನವರು ತಮ್ಮ ಕಥೆಗಳಲ್ಲಿ ಅಭಿವ್ಯಕ್ತಿಸಿರುವ ಪ್ರಾದೇಶಿಕತೆಯ ವಿವಿಧ ಅಂಶಗಳು ಅತಿರಂಜಿತವಾಗಿದ್ದು, ವಾಸ್ತವದಲ್ಲಿ ಅವರು ನಿರೂಪಿಸುವ ಭೂಮಾಲಿಕ ವ್ಯವಸ್ಥೆಯಾಗಲಿ, ಶಿಲಾಯುಗದ ಮಾದರಿಯ ಹಳ್ಳಿಗಳಾಗಲಿ ಅಲ್ಲಿರುವುದಿಲ್ಲ.

ಇದಕ್ಕೆ ತದ್ವಿರುದ್ಧವಾಗಿ ಕುಂವೀ ಅವರು ಶಿಕ್ಷಕರಾಗಿ ಕೆಲಸ ನಿರ್ವಹಿಸಿದ ಭಾಗದವರೇ ಆದ ವೀರಭದ್ರ ಅವರ ಕಥೆಗಳಲ್ಲಿನ ಪ್ರಾದೇಶಿಕ ಸ್ವರೂಪ ಕುಂವೀ ಅವರ ಕಥೆಗಳಲ್ಲಿ ಪ್ರಕಟಗೊಂಡ ಪ್ರಾದೇಶಿಕತೆಯ ವಿವರಗಳಿಗಿಂತ ಭಿನ್ನವಾಗಿದೆ. ವೀರಭದ್ರ ಅವರು ಎಲ್ಲಿಯೂ ಕುಂವೀಯವರಂತೆ ಪ್ರಾದೇಶಿಕ ವಿವರಗಳನ್ನು ಅತಿರಂಜಿತ ಗೊಳಿಸಿ ಹೇಳುವುದಿಲ್ಲ. ವೀರಭದ್ರ ಅವರ ಕಥೆಗಳ ನಿರೂಪಣೆ ಶಿಷ್ಟ ಕನ್ನಡದಲ್ಲೇ ಇದ್ದು ಸಂಭಾಷಣೆಗಳನ್ನು ಆಡು ನುಡಿಯಲ್ಲೇ ನೀಡುತ್ತಾರೆ.

ಕುಂವೀಯುವರು ಕಥೆಗಾರರಾಗಿ ಅನುಪಮ ಸಾಧನೆ ಮಾಡಿದ್ದರೂ ಕಲೆಗಾರಿಕೆಯಲ್ಲಿ ವೀರಭದ್ರ ಅವರ ಕಥೆಗಳಿಗೆ ಸರಿಗಟ್ಟಲಾರವು.

ಒಂದು ಸಣ್ಣ ಎಳೆಯೊಂದರ ಮೂಲಕ ಕಥೆ ಪ್ರಾರಂಭಿಸಿ ವಿವರಗಳನ್ನು ಎಳೆದಾಡುತ್ತಾ ಆಡುನುಡಿಯ ಭಾಷಿಕ ಕಸರತ್ತು ನಡೆಸುತ್ತಾ ಹರಟೆಯ ಮಟ್ಟದಲ್ಲೇ ಉಳಿದು ಬಿಡುವ ಅಪಾಯದಿಂದ ಕುಂವೀ ಅವರ ಕಥೆಗಳು ಪಾರಾಗಿಲ್ಲ. ಕಥೆ..ಕಥೆಯಲ್ಲಿನ ಘಟನೆ, ಮತ್ತೊಂದು ಘಟನೆ ಹೀಗೆ ಒಂದಕ್ಕೊಂದು ಬೆಳೆಯುವ ಪೂರಕ ಕ್ರಿಯೆಯಾಗದೆ ಕಥನ ಕ್ರಿಯೆಯು ಯಾವ ಹೊಸ ಆಯಾಮವನ್ನೂ ಗಳಿಸಿಕೊಳ್ಳಲಾಗದೆ ಹರಟೆಯ ಮಟ್ಟದಲ್ಲೆ ಅಥವಾ ಪ್ರಬಂಧವೊಂದರ ಹಂತದಲ್ಲೇ ನಿಂತು ಬಿಡುವ ಅಪಾಯದಿಂದ ಇವರ ಕಥೆಗಳು ಪಾರಾಗಿಲ್ಲವೆಂದೇ ಹೇಳಬೇಕಾಗುತ್ತದೆ.

ಕುಂವೀಯುವರ ಕಥೆಗಳಲ್ಲಿ ಬಿಂಬಿತವಾದ ಪ್ರಾದೇಶಿಕತೆಯ ಅಂಶಗಳ ಜೊತೆಗೆ ಕೆಲವು ತಾತ್ವಿಕ ಪ್ರಶ್ನೆಗಳು ಉದ್ಭವಿಸುವುದು ಸಹಜವಾಗಿದೆ. ದಲಿತರಲ್ಲದ ಲೇಖಕರು ದಲಿತರ ಬದುಕನ್ನು ಅವರ ಬದುಕಿನಿಂದ ಹೊರಗೆ ನಿಂತು ನೋಡುವುದು, (ಕತ್ತಲಸು ತ್ರಿಶೂಲ ಹಿಡಿದ ಪ್ರಸಂಗ) ಕತ್ತಲಸಂತಹ ಪಾತ್ರದ ಮೂಲಕ ಭೀಕರವಾದ ಹಸಿವೊಂದನ್ನು ಸೃಷ್ಟಿಸಲು ಹೆಣಗುತ್ತಿರುವುದು ಹಾಸ್ಯಾಸ್ಪದವೆನಿಸುತ್ತದೆ. ಕಥೆಯ ವಸ್ತು ಮತ್ತು ತಂತ್ರ, ನಿರೂಪಣೆ ಇವ್ಯಾವೂ ಬಿಟ್ಟಂದದಲ್ಲಿ ಕಥೆಯನ್ನು ಪರಿಪುಷ್ಟಿಗೊಳಿಸುವಲ್ಲಿ ವಿಫಲವಾಗುತ್ತವೆಂದೇ ಹೇಳಬೇಕಾಗುತ್ತದೆ. ಇಲ್ಲದಿದ್ದಲ್ಲಿ ಕತ್ತಲ ಹಸಿವಿನಿಂದ ತತ್ತರಿಸುತ್ತ ಓಣಿಗಳಲ್ಲಿ ಹಾದು ಬರುವಾಗ ಅವನು ಹಸಿವಿಗೆ ಪ್ರತಿಕ್ರಿಯಿಸುವ ಬಗೆ ದಲಿತರ ಆತ್ಮಗೌರವವನ್ನು ಸ್ವಾಭಿಮಾನವನ್ನು ಹೀಗೆಳೆದಂತೆಯೇ ಆಗುತ್ತದೆ. ಬಹುಶಃ ದಲಿತರಲ್ಲದ ಕಥೆಗಾರರು ಇಂತಹ ಬಗೆಯ ವಸ್ತುಗಳನ್ನು ಆಯ್ದುಕೊಳ್ಳುವಾಗ ಇರುವ ಕನಿಷ್ಟ ನೈತಿಕ ಎಚ್ಚರ ಸಹ ಇಲ್ಲಿಲ್ಲವೆಂತಲೇ ಹೇಳಬೇಕಾಗುತ್ತದೆ. ಕಥೆಗಾರರು ತಾವು ನಂಬಿದ ಸಿದ್ಧಾಂತ, ತತ್ವಗಳನ್ನು ಪ್ರತಿಪಾದಿಸಲು

ಕಥೆಯಂತಹ ಕಲಾತ್ಮಕ ಮಾಧ್ಯಮವನ್ನು ಆರಿಸಿಕೊಳ್ಳುವಾಗ ತಾವು ಸೃಷ್ಟಿಸುವ ಪಾತ್ರಗಳಿಗೆ ಕನಿಷ್ಠಪಕ್ಷದ ನ್ಯಾಯವಾದರೂ ಸಿಗುವಂತಿರಬೇಕು. ಇದನ್ನು ಮತ್ತಷ್ಟು ಸ್ಪಷ್ಟಪಡಿಸುವಾದದರೆ ಕುಂವೀ ಅವರ ಮತ್ತೊಂದು ಕಥೆ 'ದೇವರ ಹೆಣ'ವನ್ನು ಪರಿಶೀಲಿಸಬಹುದಾಗಿದೆ.

ಮೊದಲನೆಯದಾಗಿ ಈ ಕಥೆಯಲ್ಲಿ ಬರುವ ಪ್ರಾದೇಶಿಕ ಭಾಷೆ, ಶೈಲಿ, ನುಡಿಗಟ್ಟುಗಳು, ವ್ಯಂಗ ಇದೆಲ್ಲವನ್ನೂ ಒಳಗೊಂಡಂತೆ ಕುಂವೀ ಅವರ ಕಥನದ ಶೈಲಿ ಅದ್ಭುತವೆನ್ನಬಹುದಾದ ಮಟ್ಟಿಗೆ ಇದೆ. ಆದರೆ ಭಾಷೆಯೊಂದನ್ನು ಹೊರತು ಪಡಿಸಿದರೆ ಕಥನದಲ್ಲಿ ಬರುವ ಪ್ರಾದೇಶಿಕ ಅಂಶಗಳು ಎಷ್ಟರ ಮಟ್ಟಿಗೆ ನಿಜವಾದವು ಎನ್ನುವ ಪ್ರಶ್ನೆ ಎದುರಾಗುತ್ತದೆ. 'ಕತ್ತಲನು ತ್ರಿಶೂಲ ಹಿಡಿದ ಕಥೆ'ಯಲ್ಲಿಯಂತೆಯೇ ಇಲ್ಲೂ ಸಹ ಹಸಿವಿನ ಹಿನ್ನೆಲೆಗೆ ಕಥೆಗಾರರು ಕೊಡುವ ಕಾರಣ ವಸ್ತುವಿಗೆ ಪೂರಕವಾಗಿಲ್ಲ. ದಲಿತನೊಬ್ಬ ಸತ್ತದನಕ್ಕಾಗಿ ಸ್ವಾಭಿಮಾನ ತೊರೆದು ಹೂಳಿದ ಎತ್ತನ್ನು ತಿನ್ನುವ ಭೀಕರ ಬರಗಾಲ ಕುಂವೀ ಅವರ ಕಾಲಮಾನದಲ್ಲಿ ಯಾವ ಇಸ್ವಿಯಲ್ಲಿ ಕಾಣಿಸಿಕೊಂಡಿತ್ತು ಎಂಬ ಪ್ರಶ್ನೆ ಉದ್ಭವಿಸುತ್ತದೆ. ಇಂತಹ ನಿಲುವೇ ಲೇಖಕರ ಸಾಮಾಜಿಕ ಬದ್ಧತೆಯನ್ನು ಪ್ರಶ್ನಿಸುವಂತೆ ಮಾಡುತ್ತದೆ. ಕಥೆಯ ವಸ್ತುವಿನ ಆಯ್ಕೆಯಲ್ಲಿ ಮತ್ತು ತಾನು ನಂಬಿದ ಸಾಹಿತ್ಯಿಕ ಚಳವಳಿಯೊಂದರ ಸಿದ್ಧಾಂತಗಳ ಪ್ರತಿಪಾದನೆಗೆ ತಳಸಮುದಾಗಳ ಜೀವನವನ್ನು ಉಚಿತವಲ್ಲದ ರೀತಿಯಲ್ಲಿ ಅರ್ಥೈಸುವ ಪ್ರಕ್ರಿಯೆ ಮಾತ್ರ ಅಪಾಯಕಾರಿಯಾದುದಾಗಿದೆ. ಪ್ರಾದೇಶಿಕ ಭಾಷೆ ಮತ್ತು ನುಡಿಗಟ್ಟುಗಳನ್ನೊಳಗೊಂಡ ಶೈಲಿಯೊಂದಿದ್ದರೆ ಸಾಲದು, ಅದರಾಚೆಗೂ ವಸ್ತುವಿನ ಆಯ್ಕೆ ಮತ್ತು ಅದನ್ನು ನಿಭಾಯಿಸುವ ಸಾಮರ್ಥ್ಯ ಲೇಖಕರಿಗಿರಬೇಕಾಗುತ್ತದೆ.

ಬಹುಶಃ ಇದೇ ಅರ್ಥದಲ್ಲಿ ಕುಂವೀ ಅವರು ತಮ್ಮ ಸಾಹಿತ್ಯಕ್ಕಿರುವ ಪ್ರೇರಣೆಗಳ ಕುರಿತ ಲೇಖನಕ್ಕೆ ರಹಮತ್ ತರೀಕೆರೆಯವರು ಪ್ರತಿಕ್ರಿಯಿಸಿರುವುದು ಅರ್ಥಪೂರ್ಣವಾಗಿದೆ. ಆ ಪ್ರತಿಕ್ರಿಯೆ ಹೀಗಿದೆ. "ತಮಗೆ ಪ್ರೇರಕವಾದ ಅನೇಕ ಸಂಗತಿಗಳನ್ನು ಕುರಿತು ಹೇಳಿದರೂ ಆಂಧ್ರದ ಹಳ್ಳಿಗಳ ಪರಿಸರಕ್ಕೆ ವಿಶೇಷ ಆದ್ಯತೆಯನ್ನು ಕುಂವೀ ನೀಡಿದ್ದಾರೆ. ಅಂದರೆ ಜನಸಮುದಾಯದ ಭಾಗವಾಗಿ ಬದುಕುವ ಲೇಖಕರು ಆ ಪರಿಸರದಿಂದ ಕಲಿಯುವ ಮತ್ತು ಬೆಳೆಯುವ ಸಾಧ್ಯತೆಯನ್ನು ಹೇಳುವುದು ಇಲ್ಲಿನ ವಾದವಾಗಿದೆ. ಪಾಂಡಿತ್ಯ ಪ್ರತಿಭೆಗಳಿಗಿಂತ ಲೇಖಕರನ್ನು ರೂಪಿಸುವುದು ಅವರು ಹಾಯುವ ಅಪರೂಪದ ಅನುಭವ ಜಗತ್ತಿನಿಂದ ಎಂದು ಹೇಳುವುದು; 'ಶಿಲಾಯುಗದ ಹಳ್ಳಿಯ' ಅನುಭವಗಳೇ ತಮ್ಮನ್ನು ಲೇಖಕನನ್ನಾಗಿ ಮಾಡಿದವು ಎಂದು ಹೇಳುವಾಗ ಕಾಣುವ ಅಭಿಮಾನ ಸಂತೋಷ ಖಚಿತತೆ ಗಮನಿಸಬೇಕು. ಆ ಹಳ್ಳಿಗಳನ್ನು ಅವರು 'ವಿಶ್ವವಿದ್ಯಾಲಯಗಳು' ಎನ್ನುತ್ತಾರೆ. ಅಲ್ಲಿನ ಜನರನ್ನು ಗುರುಗಳು ಎಂದು ಕರೆಯುತ್ತಾರೆ. ಇದೊಂದು ಬಗೆಯಲ್ಲಿ ಉದ್ದೇಶಪೂರ್ವಕ ಅನುಭವವಾದಿ ಮೀಮಾಂಸೆ. ಆದರೆ ಕೇವಲ ಅನುಭವಗಳೇ ಲೇಖಕರನ್ನು ರೂಪಿಸುವುದಿಲ್ಲ. ಹೀಗಾಗುವುದಿದ್ದರೆ ಈ ಅನುಭವಗಳನ್ನು ತಮ್ಮ ವಿಶಿಷ್ಟ ದೃಷ್ಟಿಕೋನದಿಂದ 'ವಸ್ತು'ವನ್ನಾಗಿ ಒಳಗೆ ಸ್ವೀಕರಿಸುವ ಹಾಗೂ ಅವನ್ನು ಕಲೆಯ ರೂಪಾಂತರದಲ್ಲಿ ಕತೆಯನ್ನಾಗಿ ಅಭಿವ್ಯಕ್ತಿ ಮಾಡುವ ಕ್ರಿಯೆಗಳು ಇಲ್ಲಿ ಸಂಭವಿಸಿವೆ. ಈ ಪ್ರಜ್ಞೆ ಬಂದಿದ್ದು ಆಧುನಿಕ ಶಿಕ್ಷಣದಿಂದ ಪಡೆದ ಅನುಭವ ಕಲೆಯಾಗುವ ನುಡವಿನ ಸಂಕೀರ್ಣವಾದ ಸಂಘರ್ಷಗಳನ್ನು ಲೇಖನವು ಉತ್ಪ್ರೇಕ್ಷಿತ ಶೈಲಿಯಲ್ಲಿ ಕೊಂಚ ಸರಳೀಕರಿಸಿ ಚಿತ್ರಿಸುತ್ತದೆ" (ಮಾತು ತಲೆಯೆತ್ತುವ ಬಗೆ, ಪು. ೩೨೨).

# ಪರಾಮರ್ಶನ ಗ್ರಂಥಗಳು


೧. ಅಮರೇಶ ನುಗಡೋಣಿ, ೧೯೯೫, **ಬಿಸಿಲ ಹನಿಗಳು**, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು,ರಾಯಚೂರು, ೧೯೯೫

೨. ಅಮರೇಶ ನುಗಡೋಣಿ, ೧೯೯೫, **ಶ್ರೀಕೃಷ್ಣ ಆಲನಹಳ್ಳಿ**, ಪ್ರಸಾರಾಂಗ, ಕ.ವಿ.ವಿ.ಹಂ.

೩. ಅಶೋಕ ಟಿ. ಪಿ., ೧೯೯೧, **ಸಾಹಿತ್ಯ ಸಂದರ್ಭ**, ಅಕ್ಷರ ಪ್ರಕಾಶನ, ಹೆಗ್ಗೋಡು,

೪. ಅಮೂರ ಜಿ. ಎಸ್. **ಕನ್ನಡ ಕಥನ ಸಾಹಿತ್ಯ: ಸಣ್ಣಕಥೆ**, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೦೩

೫. ಕರೀಗೌಡ ಬೀಚನಹಳ್ಳಿ, **ಶತಮಾನಗಳ ಕಥೆಗಳ ಸಮೀಕ್ಷೆ**, ಕ.ಸಾ.ಅ., ಬೆಂಗಳೂರು, ೨೦೦೩

೬. ಕರೀಗೌಡ ಬೀಚನಹಳ್ಳಿ, ೧೯೯೧, **ವ್ಯಷ್ಟಿ ಮತ್ತು ಸಮಷ್ಟಿ**, ಅನಂತ ಪ್ರಕಾಶನ, ಬೆಂಗಳೂರು

೭. ಗಿರಿಡ್ಡಿ ಗೋವಿಂದರಾಜು, ೧೯೭೬, **ಕಾದಂಬರಿ ವಸ್ತು ಮತ್ತು ತಂತ್ರ**, ಬಾಪ್ಕೋ ಪ್ರಕಾಶನ, ಬೆಂಗಳೂರು

೮. ಗಿರಡ್ಡಿ ಗೋವಿಂದರಾಜ್, **ಮಿರ್ಜಾ ಅಣ್ಣಾರಾವ್ ಅವರ ಸಾಹಿತ್ಯ**, ಕ.ಸಾ.ಅ., ಬೆಂಗಳೂರು, ೨೦೦೨

೯. ಅಮೂರ ಜಿ. ಎಸ್., ೧೯೮೮, **ಅರ್ಥಲೋಕ**, ಸ್ನೇಹ ಪ್ರಕಾಶನ, ಬೆಂಗಳೂರು,

೧೦. ಅನಂತ ಮೂರ್ತಿ ಯು. ಆರ್, ೧೯೮೦, **ಸಮಕ್ಷಮ**, ಅಕ್ಷರ ಪ್ರಕಾಶನ, ಹೆಗ್ಗೋಡು

೧೧. ರಾಮಚಂದ್ರ ಆರ್., ೨೦೦೪, **ಪೂರ್ವ ಪಶ್ಚಿಮ**, ಸಿ.ವಿ.ಜಿ.ಪಬ್ಲಿಕೇಶನ್ಸ್, ಬೆಂಗಳೂರು

೧೨. ರಹಮತ್ ತರೀಕೆರೆ, (ಸಂ.), **ಮಾತು ತಲೆಯೆತ್ತುವ ಬಗೆ**, ಪ್ರಸಾರಾಂಗ, ಕ.ವಿ.ವಿ.ಹಂ., ೨೦೦೫

೧೩. ರಹಮತ್ ತರೀಕೆರೆ, ಇಲ್ಲಿ ಯಾರೂ ಮುಖ್ಯರಲ್ಲ, ಪ್ರಸಾರಾಂಗ, ಕ.ವಿ.ವಿ.ಹಂ., ೨೦೦೫

೧೪. ರಾಘುವೇಂದ್ರರಾವ್ ಹೆಚ್. ಎಸ್., ಸಂ., ಶತಮಾನದ ಸಾಹಿತ್ಯ ವಿಮರ್ಶೆ, ಕ.ಸಾ.ಅ., ಬೆಂಗಳೂರು, ೨೦೦೧

೧೫. ನಾಗಭೂಷಣ ಸ್ವಾಮಿ ಓ. ಎಲ್., ೧೯೮೯, **ಸಾಹಿತ್ಯ ವಿಮರ್ಶೆ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೬. ನಾರಾಯಣ ಕೆ. ವಿ., ೧೯೯೭, ಬೇರು ಕಾಂಡ ಚಿಗುರು, ವಿವೇಕ ಪ್ರಕಾಶನ, ಬೆಂಗಳೂರು

೧೭. ಕಲಬುರ್ಗಿ ಎಂ. ಎಂ., ೧೯೯೩, ಕನ್ನಡ ಸಂಶೋಧನಾ ಶಾಸ್ತ್ರ, ಸೌಜನ್ಯ ಪ್ರಕಾಶನ, ಧಾರವಾಡ

೧೮. ನಾಯಕ್ ಜಿ. ಎಚ್., ೨೦೦೦, ಶತಮಾನದ ಕನ್ನಡ ಸಾಹಿತ್ಯ, ರಾಘವೇಂದ್ರ ಪ್ರಕಾಶನ, ಅಂಕೋಲ, ಉತ್ತರ ಕನ್ನಡ

೧೯. ಗಿರಡ್ಡಿ ಗೋವಿಂದರಾಜು, ೨೦೦೧, ಸಮಗ್ರ ವಿಮರ್ಶೆ, ಸ್ವಪ್ನ ಬುಕ್ ಹೌಸ್, ಬೆಂಗಳೂರು

೨೦. ನಾಗರಾಜ ಡಿ. ಆರ್., ೧೯೮೭, ಶಕ್ತಿ ಶಾರದೆಯ ಮೇಳ, ಅಕ್ಷರ ಪ್ರಕಾಶನ, ಹೆಗ್ಗೋಡು

೨೧. ಶಾಂತಿನಾಥ ದೇಸಾಯಿ, ೧೯೯೦, ನವ್ಯ ಸಾಹಿತ್ಯ ದರ್ಶನ, ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ

೨೨. ಶಿರೂರ ಬಿ. ವಿ., ೨೦೦೦, ಸಂಶೋಧನೆಯ ಸ್ವರೂಪ, ಸ್ನೇಹ ಪ್ರಿಂಟರ್ಸ್, ಬೆಂಗಳೂರು

೨೩. ಚಿದಾನಂದ ಮೂರ್ತಿ, ೨೦೦೨, ಸಂಶೋಧನೆ, ಕರ್ನಾಟಕ ಪ್ರೆಸ್, ಮೈಸೂರು,

೨೪. ಚಂದ್ರಿಕಾ ಪಿ., (ಸಂ.), ಯಾರ ಜಪ್ತಿಗೂ ಸಿಗದ ನವಿಲುಗಳು, ಅಭಿನವ ಪ್ರಕಾಶನ, ಬೆಂಗಳೂರು, ೧೯೯೯

೨೫. ಚಿದಾನಂದ ಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, (ಕ್ರಿ.ಶ. ೪೫೦ ರಿಂದ ೧೧೫೦), ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೨

೨೬. ಕಲಬುರ್ಗಿ ಎಂ. ಎಂ., ೨೦೦೨, ಕನ್ನಡ ಸಂಶೋಧನಾ ಶಾಸ್ತ್ರ, ಸ್ವಪ್ನ ಬುಕ್ ಹೌಸ್, ಬೆಂಗಳೂರು,

೨೭. ಶಿವರುದ್ರಪ್ಪ ಜಿ. ಎಸ್., ೨೦೦೩, ವಿಮರ್ಶೆಯ ಪೂರ್ವ ಪಶ್ಚಿಮ, ಸಾಹಿತ್ಯ ಭಂಡಾರ, ಬೆಂಗಳೂರು

೨೮. ಸಂಗಮೇಶ ಸವದತ್ತಿ ಮಠ, ೨೦೦೩, ಕನ್ನಡ ಸಾಹಿತ್ಯ ಸಂಶೋಧನೆಯ ಇತಿಹಾಸ, ಕನ್ನಡಪುಸ್ತಕ ಪ್ರಾಧಿಕಾರ, ಬೆಂಗಳೂರು

೨೯. ಸಾಮಾಜಿಕ ಹಾಗೂ ಆರ್ಥಿಕ ಸಮೀಕ್ಷೆ, ಜಿಲ್ಲಾ ಸಂಖ್ಯಾಧಿಕಾರಿಗಳ ಕಛೇರಿ, ಬಳ್ಳಾರಿ, ೧೯೯೫-೯೬

೩೦. ನಾಗರಾಜ್ ಡಿ. ಆರ್., ಶಕ್ತಿ ಶಾರದೆಯ ಮೇಳ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೨೦೦೨

೩೧. ಬಳ್ಳಾರಿ ಗ್ಯಾಸೆಟಿಯರ್, ಕರ್ನಾಟಕ ಸರ್ಕಾ ಬೆಂಗಳೂರು, ೧೯೭೨

೩೨. ಬಸವರಾಜ ಸಬರದ, (ಸಂ.), ಚಿನ್ನದ ಕಥೆಗಳು, ಪ್ರಸಾರಾಂಗ, ಗುಲ್ಬರ್ಗಾ ವಿ. ವಿ. ೨೦೦೫

೩೩. ಬಾಲಸುಬ್ರಹ್ಮಣ್ಯ, (ಸಂ.), ಕುರುಗೋಡು, ಪ್ರಸಾರಾಂಗ, ಕ.ವಿ.ವಿ.ಹಂ., ೨೦೦೬

೩೪. ಬಸವರಾಜ ಸಬರದ, ೨೦೦೫, **ಸಾಹಿತ್ಯ ವಿಮರ್ಶೆ**, ಪಲ್ಲವಿ ಪ್ರಕಾಶ, ಗುಲ್ಬರ್ಗಾ,

೨೧. ಶೇಷಗಿರಿ ರಾವ್, ಎಲ್. ಎಸ್., ೨೦೦೨, **ಹೊಸಗನ್ನಡ ಸಾಹಿತ್ಯ ಚರಿತ್ರೆ**, ಅಂಕಿತ ಪುಸ್ತಕ,ಬಸವನಗುಡಿ, ಬೆಂಗಳೂರು

೨೦. ವೀರಭದ್ರ, **ಅನಾಥ ಪಕ್ಷಿಯ ಕಲರವ**, ಲೋಹಿಯಾ ಪ್ರಕಾಶನ, ಬಳ್ಳಾರಿ, ೧೯೯೭

೨೧. ವೀರಭದ್ರಪ್ಪ ಕುಂ., ಬರಿ ಕಥೆಯಲ್ಲೋ ಅಣ್ಣಾ, ಸಿ.ವಿ.ಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೪

೨೧. ವೆಂಕಟೇಶ್ ಇಂದ್ವಾಡಿ, (ಸಂ.), **ಮುಂಟೇಸ್ವಾಮಿ ಸಾಂಸ್ಕೃತಿಕ ಮುಖಾಮುಖಿ**, ಪ್ರಸಾರಾಂಗ, ಕ.ವಿ.ವಿ.ಹಂ., ೨೦೦೪

೨೨. ಶಿವರಾಮ ಪಡಿಕ್ಕಲ್, **ನಾಡು-ನುಡಿಯ ರೂಪಕ**, ಪ್ರಸಾರಾಂಗ, ಮಂಗಳೂರು ವಿ.ವಿ., ಮಂಗಳೂರು, ೨೦೦೧

೨೩. ಶಿವರಾಮ ಕಾಡನಕುಪ್ಪೆ, ಸಾಮಾಜಿಕ ನೆಲೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩

೨೪. ಸಿದ್ಧಣ್ಣ ಬಿ. ಉತ್ನಾಳ್, ಕನ್ನಡ ಕಾದಂಬರಿಗಳಲ್ಲಿ ಪ್ರಾದೇಶಿಕತೆ, ಅನುಪಮ ಪ್ರಕಾಶನ, ಅಥಣಿ, ೧೯೯೭

೨೫. ಸುಜಾತ ಅಕ್ಕಿ, ಬಳ್ಳಾರಿ ಜಿಲ್ಲಾ ರಂಗನಟಿಯರ ಅಧ್ಯಯನ, ಅಪ್ರಕಟಿತ ಪಿಹೆಚ್.ಡಿ. ಮಹಾಪ್ರಬಂಧ, ಕ.ವಿ.ವಿ.ಹಂ., ೨೦೦೨

೨೬. ಸವಿತಾ, ಗ್ರಾಮದೈವಗಳ ಅಧ್ಯಯನ, ಎಂ.ಫಿಲ್. ಅಪ್ರಕಟಿತ ನಿಬಂಧ, ಕ.ವಿ.ವಿ.ಹಂ., ೨೦೦೬

